# ಶ್ರೀ ಮರುಕುಂಟ್ಲೇಶ್ವರ ದೇವರು : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)


ಸಂಶೋಧನಾ ವಿದ್ಯಾರ್ಥಿ

ಚನ್ನಪ್ಪ ಎ.ಕೆ

ಮಾರ್ಗದರ್ಶಕರು

ಡಾ. ಸುಚೇತ ನವರತ್ನ

ಅಧ್ಯಾಪಕರು

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ








ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮-೦೯

# "ಶ್ರೀ ಮರುಕುಂಟ್ಲೇಶ್ವರ ದೇವರು : ಒಂದು ಅಧ್ಯಯನ"

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)


ಸಂಶೋಧನಾ ವಿದ್ಯಾರ್ಥಿ

**ಚನ್ನಪ್ಪ ಎ.ಕೆ**

ಮಾರ್ಗದರ್ಶಕರು

**ಡಾ. ಸುಚೇತ ನವರತ್ನ**

ಅಧ್ಯಾಪಕರು

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ








ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮-೦೯

# ಪ್ರಮಾಣ ಪತ್ರ

'ಶ್ರೀ ಮರುಕುಂಟ್ಲೇಶ್ವರ ದೇವರು : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ಡಾ.ಸುಚೇತ ನವರತ್ನ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್, ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ : 30/9/09

ಸ್ಥಳ : ವಿದ್ಯಾರಣ್ಯ

Channappa. A.K.

**ಚನ್ನಪ್ಪ ಎ.ಕೆ**

ಸಂಶೋಧನಾ ವಿದ್ಯಾರ್ಥಿ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ದೃಢೀಕರಣ ಪತ್ರ

'ಶ್ರೀ ಮರುಕುಂಟ್ಲೇಶ್ವರ ದೇವರು : ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್, ಪದವಿಗಾಗಿ ಚನ್ನಪ್ಪ ಎ.ಕೆ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 30/9/09
ಸ್ಥಳ : ವಿದ್ಯಾರಣ್ಯ

ಡಾ. ಸುಚೇತ ನವರತ್ನ
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ


'ಶ್ರೀ ಮರುಕುಂಟ್ಲೇಶ್ವರ ದೇವರು'

# ಪರಿವಿಡಿ

## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ಪೀಠಿಕೆ

ಮಾನವ ಮೊದಲಿನಿಂದಲೂ ಪ್ರಕೃತಿಯ ಒಡನಾಡಿಯಾಗಿರುವುದರಿಂದ ಪ್ರಕೃತಿಯ ಶಕ್ತಿಗಳೊಡನೆ ಸಮನ್ವಯ ಕಾಯ್ದುಕೊಳ್ಳಲು ಬಯಸಿದನು. ಈ ಹಿನ್ನೆಲೆಯಲ್ಲಿ ಪ್ರಕೃತಿ ಶಕ್ತಿಗಳಾದ ಆರಾಧನಾ ಕ್ರಮವೊಂದು ಬೆಳೆದು ಬಂದಿತೆನ್ನಬಹುದು. ಇದೇ ಆಚರಣೆ ಸಂಪ್ರದಾಯ, ಪರಂಪರೆ, ಮೂಢನಂಬಿಕೆ, ಸನಾತನಧರ್ಮ, ಸಂಸ್ಕೃತಿ ಹಲವಾರು ರೂಪಗಳಾಗಿ ಇಂದಿಗೂ ನಮ್ಮ ಮುಂದೆ ಪ್ರಕೃತಿಯಲ್ಲಿ ಕಾಣಿಸಿಕೊಳ್ಳುವ ಮಳೆ, ಗಾಳಿ, ಗುಡುಗು, ಸಿಡಿಲು, ಮಿಂಚು ಇವುಗಳ ಆರ್ಭಟಗಳ ಬೆಳಕಿನಲ್ಲಿ ಕಾಣುವ ಶಕ್ತಿಯ ಕೈವಾಡವಿದೆ ಎಂದು ಭಾವಿಸಿ ಅಗೋಚರವಾದ ಶಕ್ತಿಯನ್ನು ಪೂಜಿಸುತ್ತಾ ಬಂದ. ಕಲ್ಲು, ಮರ, ಭೂಮಿ, ಆಕಾಶ, ಸೂರ್ಯ, ಚಂದ್ರ ಮುಂತಾದವುಗಳ ಅಂಶಗಳನ್ನು ಕಂಡುಕೊಳ್ಳುತ್ತಾ ಬಂದ. ಅಂದಿನಿಂದ ಇಂದಿನವರೆಗೂ ಮಾನವ ತಿಳಿಯದೆಯೇ ಹಲವಾರು ಆಚರಣೆಗಳನ್ನು ಮಾಡುತ್ತಲೇ ಬಂದಿದ್ದಾನೆ. ಹೀಗೆ ಆಚರಣೆಗೆ ಬಂದ ಆರಾಧನೆ ಕುಟುಂಬಗಳಲ್ಲಿ ಮೀಸಲಾಗಿತ್ತು. ಜನಸಂಖ್ಯೆ, ಬುದ್ಧಿವಿಕಾಸ, ನಾಗರಿಕತೆ ಬೆಳೆದಂತೆ ಆರಾಧನೆ ಕುಟುಂಬದ ಚೌಕಟ್ಟನ್ನು ಮೀರಿ ಸಮಾಜವನ್ನು ಸೇರಿತು. ಬರಬರುತ್ತಾ ಇದರ ವ್ಯಾಪ್ತಿಗ್ರಾಮದಿಂದ ನಗರಕ್ಕೆ ನಿಯಮಿತತನ ಪಡೆದು ಆರಾಧನೆಯೇ ಆಚರಣೆಗಳ ಜಾತ್ರೆಗಳಿಗೆ ಕಾರಣವಾಯಿತು. ಆರಾಧನೆಗೆ ಜಾತ್ರೆ, ಜಾತ್ರೆಗೆ, ಆರಾಧನೆ ಪೂರಕವಾಗಿರುತದೆ.

ಈ ಹಿನ್ನೆಲೆಯಲ್ಲಿ ಪ್ರಸುತ್ತ ಅಧ್ಯಯನ ಕೇಂದ್ರಬಿಂದುವಾದ ಶ್ರೀ ಮರುಕುಂಟ್ಲೇಶ್ವರ, ದೇವರು ಕೂಡ ಈ ಚಿಂತನೆಯ ನೆಲೆಯಲ್ಲಿಯೇ ರೂಪಗೊಂಡಿದೆ ಎನ್ನಬಹುದು.

### ಉದ್ದೇಶ

ಶ್ರೀ ಮರುಕುಂಟ್ಲೇಶ್ವರ ದೇವರ ವಿಷಯವು ಇದುವರೆಗೂ ಯಾವುದೇ ವಿಷಯ ಕೋಶದಲ್ಲಾಗಲಿ, ವಿಶ್ವಕೋಶದಲ್ಲಾಗಲಿ, ಮತ್ತು ಇನ್ನಿತರ ಯಾವುದೇ ಲೇಖನಗಳಲ್ಲಿ ಇದುವರೆಗೆ ಕಂಡುಬಂದಿಲ್ಲ. ಈ

ಹಿನ್ನೆಲೆಯಲ್ಲಿ ಅಲಕ್ಷಿತ ಕ್ಷೇತ್ರವೊಂದರಲ್ಲಿ ಕಂಡುಬರುವ ಆಚರಣೆ, ಸಂಪ್ರದಾಯ, ಪವಾಡಗಳು, ನಂಬಿಕೆಗಳು ಬೇರೆ ದೈವಗಳಲ್ಲಿ ಕಂಡುಬಂದರೂ! ಈ ದೈವದಲ್ಲಿ ಬಹಳ ವಿಭಿನ್ನ ರೀತಿಯಲ್ಲಿ ವಿಶೇಷವಾಗಿ ಕಂಡುಬಂದಿವೆ.

ಆದ್ದರಿಂದ ಈ ಹಿನ್ನೆಲೆಯಲ್ಲಿ ಈ ಆಲಕ್ಷಿತ ಕ್ಷೇತ್ರವೊಂದರ ಕಂಡುಬರುವ ಸಂಪ್ರದಾಯ, ಆಚರಣೆ, ಅಗ್ನಿಕುಂಡ, ಗಂಗೆಪೂಜೆ ಮಾಡುವುದು, ಎತ್ತುಗಳ ಓಟಗಳು, ಈ ಮುಂತಾದ ಆಚರಣೆಗಳು ಇತರೆ ದೈವಗಳಿಗಿಂತ ಭಿನ್ನವಾಗಿ ಕಂಡು ಬಂದಿವೆ. ಬಹುಶಃ ಸಮಾಜ ಎಷ್ಟೇ ಮುಂದುವರೆದರೂ ದೇವರು, ದೈವಗಳ ವಿಷಯದಲ್ಲಿನ ಜನರ ನಂಬಿಕೆಗಳು ಬದಲಾಗಿಲ್ಲ, ಹಾಗೇಯೇ ಆ ದೈವವನ್ನು ಕುರಿತಾಗಿ ಜನರಲ್ಲಿನ ವಿಶ್ವಾಸವನ್ನು ನಾವು ಗೌಣವಾಗಿಸಲು ಸಾಧ್ಯವಿಲ್ಲ. ಇದನ್ನು ಮೂಢನಂಬಿಕೆ ಎನ್ನುವುದಕ್ಕಿಂತ ವಿಶ್ವಸವೆನ್ನಬಹುದೇನೋ ಎಂಬುದರ ಬಗ್ಗೆ ಜನಸಾಮಾನ್ಯರಿಗೆ ತಿಳಿಸಬೇಕಾಗಿದೆ. ಆದ್ದರಿಂದ ಈ ಹಿನ್ನೆಲೆಯಲ್ಲಿ ಈ ಆಲಕ್ಷಿತ ಕ್ಷೇತ್ರವೊಂದನ್ನು ಅಧ್ಯಯನಕ್ಕೊಳಪಡಿಸುವುದೇ ಪ್ರಸ್ತುತ ಅಧ್ಯಯನದ ಮೂಲ ಉದ್ದೇಶವಾಗಿದೆ.

**ವ್ಯಾಪ್ತಿ**

ಈ ~~ದೈವದ~~ ಅಧ್ಯಯನದ ವ್ಯಾಪ್ತಿಯು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಗಂಡ ಬೊಮ್ಮನಹಳ್ಳಿ ಗ್ರಾಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವ ಕೆ.(ಕೆಂಚಗೆರೆ) ದಿಬ್ಬದ ಹಳ್ಳಿಯಲ್ಲಿ ಶ್ರೀ ಮರುಕುಂಟ್ಲೇಶ್ವರ ದೇವರಿಗೆ ಸಂಬಂಧಿಸಿದೆ.

**ವೈಧಾನಿಕತೆ**

ಲಿಖಿತ ರೂಪದಲ್ಲಿ ಲಭ್ಯವಿಲ್ಲದ ಶ್ರೀಮರುಕುಂಟ್ಲೇಶ್ವರ ದೇವರು ಕುರಿತಾಗಿ ಜನರ ನಂಬಿಕೆ, ಪವಾಡ, ಸಂಪ್ರದಾಯಗಳು, ಆಚರಣೆಗಳು, ಆಚಾರವಿಚಾರ ಮತ್ತು ಮೌಖಿಕ ಪರಂಪರೆಯನ್ನಷ್ಟೇ ಹೊಂದಿದ ಕ್ಷೇತ್ರವಾಗಿದೆ. ಮೂಲವಾಗಿಸಿ ಅಧ್ಯಯನ ಕ್ರಮವನ್ನು ರೂಪಿಸಲಾಗಿದೆ.

**ಸ್ವರೂಪ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿ ಬರುವಂತಹ ದಿಬ್ಬದ ಹಳ್ಳಿ ಪ್ರದೇಶವು ಬಯಲು ಸೀಮೆ ಹಾಗೂ ಗುಡ್ಡಗಾಡುಗಳಿಂದ ಕೂಡಿದ್ದು, ಇಲ್ಲಿಯ ಜನರು ಮಳೆಯನ್ನೇ ನಂಬಿ ಜೀವನವನ್ನು ಸಾಗಿಸುತ್ತಾರೆ. ಅಲ್ಲಲ್ಲಿ ಜಾತೀಯತೆಯು ಕಂಡುಬಂದರೂ, ಎಲ್ಲಾರು ಒಂದೇ ರೀತಿಯಾಗಿ ಜೀವನವನ್ನು ನೆಡಿಸುತ್ತಾರೆ. ಈ ದೈವವನ್ನು ನಾಯಕ ಜನಾಂಗದವರು ಪೂಜಿಸುತ್ತಾರೆ. ಈ ಹಿನ್ನೆಲೆಯಲ್ಲಿ ದಿಬ್ಬದಹಳ್ಳಿ, ತಿಮ್ಮನಹಳ್ಳಿ, ಸುತ್ತಮುತ್ತಲಿನ ಗ್ರಾಮಗಳು ಈ ದೇವರನ್ನು ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ. ಈ ದೈವವನ್ನು ಪೂಜಿಸುವಂತಹ, ಆರಾಧಿಸುವಂತಹ ಜನರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದ ಜನಾಂಗದವರಾಗಿದ್ದು, ಆಯಾ ಜಾತಿಗೆ ಸಂಬಂಧಿಸಿದಂತೆ ತಮ್ಮದೇ ಆದ ಕುಲಕಸುಬುಗಳನ್ನು ಮಾಡಿಕೊಂಡು ಮುಂದುವರೆಯುತ್ತಾ ಬಂದಿದ್ದಾರೆ. ಈ ದೇವರಿಗೆ ಸಂಬಂಧಿಸಿದಂತೆ ಪ್ರತೀ ವರ್ಷಕ್ಕೊಮ್ಮೆ

ಜಾತ್ರೆಯನ್ನು ಮಾಡುತ್ತಾ ಆಚರಣೆಗಳು ಸಂಪ್ರದಾಯಗಳೂ ನಂಬಿಕೆಗಳ ಜನರಾಗಿ ಹಿಂದಿನ ಕಾಲದಿಂದಲೂ ಮುಂದುವರೆಸಿಕೊಂಡು ಬಂದಿದ್ದಾರೆ. ವಿಶೇಷವಾಗಿ ಈ ದೈವದ ಜಾತ್ರೆಯಲ್ಲಿ ಆಯಾ ಜಾತಿ ಜನಾಂಗದವರು ಕ್ರಮ ಬದ್ಧವಾಗಿ ಆಚರಣೆಗಳನ್ನು ಆಚರಿಸುತ್ತಾ ಬಂದಿರುವುದನ್ನು ಕಾಣಬಹುದು.

ಈ ದೈವವನ್ನು ನಾಯಕ ಜನಾಂಗಕ್ಕೆ ಸೇರಿದ ಜನರು ಹೆಚ್ಚಾಗಿ ಪೂಜಿಸುವದ ಕಂಡುಬಂದರೂ ಎಲ್ಲಾ ಈ ದೇವರು ಜನಾಂಗಗಳಲ್ಲಿ ಜಾತಿ ಭಕ್ತರು ಕಂಡು ಬರುತ್ತಾರೆ. ಏಕೆಂದರೆ ಈ ದೇವರ ಹೆಸರನ್ನು ನೋಡಿದರೆ ಈಶ್ವರನ ರೂಪದಲ್ಲಿ ಕಂಡುಬಂದಿದೆ. ಇದು ಮೇಲು ಜಾತಿಯ ದೇವರೆಂದು ತಿಳಿಯಬಹುದು. ಕಾರಣ ಇಲ್ಲಿ ಕಂಡು ಬರುವ ಲಿಂಗಾದಕಾಯಿ, ಬಸವೇಶ್ವರನ ರೂಪ, ತೊಟ್ಟಿಲು, ಚಾಮರ ಬೀಸುವುದು ಕಂಡು ಬಂದಿದೆ. ಈಶ್ವರನ ತ್ರಿಶೂಲ ರೂಪದಲ್ಲಿ ದೇವರ ಬೆತ್ತದ ಕೋಲು, ಶಿವನ ಜೆಡೆಯಲ್ಲಿ ಗಂಗೆಯ ಅವತಾರ ಶಿವಗಂಗೆಯಲ್ಲಿ, ಶಿವನವಾಹನ ರೂಪದಲ್ಲಿ ದೇವರ ಗೂಳಿ ಕಂಡುಬರುತ್ತವೆ. ಈ ಎಲ್ಲಾ ಅವತಾರಗಳನ್ನು ನೋಡಿದರೆ ನಿಜವಾಗಿಯೂ ಇದು ಮೇಲು ಜಾತಿ ಜನರ ಪೂಜಿಸುತ್ತಾರೆ ಎಂದು ತಿಳಿಯುತ್ತದೆ.

ಈ ಮೊದಲು ನಾಯಕ ಜನಾಂಗಕ್ಕೆ ಈ ದೈವವು ಒಲುಮೆಯಾಯಿತು. ಆದರೂ ಕೂಡ ಉನ್ನತ ಜನಾಂಗದವರಿಗೆ ಪೂಜಿಸಲು ಅನುಮತಿಯನ್ನು ಕೊಟ್ಟಿದ್ದಾರೆ. ಕೆಲವು ದಿನಗಳ ಕಾಲ ಆ ದೇವರನ್ನು ಉನ್ನತ ಜನಾಂಗದವರು ಪೂಜಿಸುತ್ತಾ ಬಂದರು. ನಂದರ ಅವರ ಮನೆಗಳಲ್ಲಿ ಹಲವಾರು ತೊಂದರೆಗಳು ಕಂಡುಬಂದಿದರಿಂದ ಈ ದೈವವನ್ನು ಪುನಃ ನಾಯಕ ಜನಾಂಗದವರಿಗೆ ಪಟ್ಟವನ್ನು ಕಟ್ಟಲಾಯಿತು. ಅಂದಿನಿಂದ ಹಿಡಿದು ಇಂದಿನವರೆಗೂ ದೇವರ ಪೂಜೆ ಪುನಸ್ಕಾರಗಳು ನಾಯಕ ಜನಾಂಗದವರು ಮುಂದುವರೆಸಿಕೊಂಡು ಬಂದಿರುವುದನ್ನು ಕಾಣಬಹುದು. ಹಾಗೂ ಕೆಲವು ಆಚರಣೆಗಳಾದ 'ಅಗ್ನಿಕುಂಡ' ಮಾಡುವದನ್ನು ತಿಮ್ಮನಹಳ್ಳಿಯ ಮಾದಿಗ ಜನಾಂಗಕ್ಕೆ ವಹಿಸಿಕೊಡಲಾಯಿತು. ದೇವರ ಮಡಿಬಟ್ಟೆಯ ಕಾರ್ಯವನ್ನು ನಡುವಲಹಳ್ಳಿ ತಿಪ್ಪಯ್ಯನಿಗೆ, ದೇವರ ಚಾಮರಬೀಸುವ ಕಾರ್ಯವನ್ನು ದಿಬ್ಬದಹಳ್ಳಿಯ ತಿಮ್ಮರೆಡ್ಡಿಯವರಿಗೆ, ದನಗಳನ್ನು ಕಾಯುವ ಕಾರ್ಯಕ್ಕೆ ಕಿಲಾರಿ ಪಾಪಯ್ಯನಿಗೆ ವಹಿಸಿಕೊಡಲಾಯಿತು. ಹೀಗೆ ಮರುಕುಂಟ್ಲೇಶ್ವರ ದೈವಕ್ಕೆ ಸಂಬಂಧಿಸಿದಂತೆ ಆಚರಣೆಗಳು, ಸಂಪ್ರದಾಯಗಳು ನಂಬಿಕೆಗಳನ್ನು ಅಧ್ಯಯನದ ಸ್ವರೂಪದಲ್ಲಿ ಅರ್ಥೈಸುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ.

* * *

## ಅಧ್ಯಾಯ - ಎರಡು

# ಭೌಗೋಳಿಕ ವಿವರ

ಭೌಗೋಳಿಕ ಸ್ಥಿತಿಯು ಬಹಳಷ್ಟು ಸಲ ಭೌತಿಕ ಜಾನಪದವನ್ನು ನಿಯಂತ್ರಿಸುತ್ತದೆ. ಪ್ರದೇಶವೊಂದರ ನೀರು - ಗಾಳಿ ಭೂಮಿ, ಅಲ್ಲಿಯ ಕೃಷಿಯನ್ನೋ ಬೇರೆ ಉದ್ಯೋಗವನ್ನೋ ನಿರ್ಣಯಿಸುತ್ತದೆ. ಕರಾವಳಿಯಲ್ಲಿ ಮೀನುಗಾರಿಕೆ ಮುಖ್ಯ ಉದ್ಯೋಗವಾದರೆ ಬಯಲು ಗಾಡಿನಲ್ಲಿ ಕೃಷಿಯೇ ಜೀವನೋಪಾಯದ ಮಾರ್ಗವಾಗುತ್ತದೆ. ಈ ಬಗೆಯ ಉದ್ಯೋಗ ವ್ಯವಸಾಯಗಳನ್ನವಂಬಿಸಿ ಜೀವನ ಪದ್ದತಿಯಲ್ಲಿ ಭಿನ್ನತೆ ತಲೆದೋರುತ್ತದೆ. ಹಾಗೆ ಬೆಸ್ತರು ಹಾಡುವ ಹಾಡುಗಳೇ ಬೇರೆ ಬಯಲು ಸೀಮೆಯವರು ಹಾಡುವ ಹಾಡುಗಳೇ ಬೇರೆ. ಹೀಗೆ ಬೇರ ಬೇರೆ ಸ್ತರದ ಜೀವನಕ್ರಮ ಭಿನ್ನ ಸಂಸ್ಕೃತಿಗಳನ್ನು ಸೃಷ್ಟಿಸುತ್ತದೆ. (ಗ್ರಾಮೀಣ ಸಮುದಾಯದ ವಿವಿಧ ಮುಖ- ಡಾ. ಶ್ರೀ ರಾಮ ಇಟ್ಟಪ್ಪ (ಪುಟ ೯೬) ( ಜನಪದ ಗ್ರಹಿಕೆ ಪರಿಕಲ್ಪನೆ)

ಒಂದು ಊರು ಅಭಿವೃದ್ಧಿ ಪಥದಲ್ಲಿ ಮುನ್ನಡೆಯಲು ನೆರವಾಗುವ ಕಾರಣಗಳಲ್ಲಿ ಅದು ನಗರ ಪಟ್ಟಣಕ್ಕೆ ಭೌಗೋಳಿಕವಾಗಿ ಎಷ್ಟು ಸಮೀಪದಲ್ಲಿದೆ ಮತ್ತು ವ್ಯವಹಾರಿಕವಾಗಿ ಬಾಹ್ಯ ಜಗತ್ತಿನೊಂದಿಗೆ ಎಷ್ಟು ನಿಕಟ ಸಂಬಂಧ ಇಟ್ಟು ಕೊಂಡಿದೆ ಎಂಬುವುದರ ಬಗ್ಗೆ ಪ್ರಮುಖವಾದ ಅಂಶಗಳನ್ನು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನದ ಕೇಂದ್ರ ಬಿಂದುವಾದ ಕೆ. (ಕೆಂಚಕೆರೆ) ದಿಬ್ಬದಹಳ್ಳಿಯು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ದಕ್ಷಿಣ ದಿಕ್ಕಿಗೆ ಬರುತ್ತದೆ. ಇದು ಕೂಡ್ಲಿಗಿ ತಾಲ್ಲೂಕಿನ ಪ್ರಸಿದ್ಧ ಗುಡೆ ಕೋಟೆ ಹೋಬಳಿ ಕೇಂದ್ರಕ್ಕೆ ಸೇರಿದೆ. ಈ ಹೋಬಳಿಯಲ್ಲಿ ಸುಮಾರು ೭೪ ಹಳ್ಳಿಗಳು ಸೇರ್ಪಡೆಯಗುತ್ತವೆ. ಇಲ್ಲಿ ಪ್ರಮುಖವಾಗಿ ದಿಬ್ಬದಹಳ್ಳಿ, ತಿಮ್ಮನಹಳ್ಳಿ, ಎಕ್ಕೇಗುಂದಿ ರಾಮಸಾಗರ ಹಟ್ಟಿಯು ಗುಡೇ ಕೋಟೆ ಹೋಬಳಿಗೆ ಸೇರುತ್ತವೆ. ಇವು ಶೈಕ್ಷಣಿಕವಾಗಿ ಹಿಂದೂಳಿದ ಹಳ್ಳಿಗಳು ಮತ್ತು ಧಾರ್ಮಿಕ ಸಂಪ್ರದಾಯಿಕ ಆಚರಣೆಗಳನ್ನು ಜೀವನ ಶ್ರದ್ಧೆಯಾಗಿಸಿದ ರೀತಿ ಇಲ್ಲಿದೆ.

೨೦೦೧ ರ ಜನಗಣತಿಯ ಪ್ರಕಾರಕ್ಕೆ ದಿಬ್ಬದಹಳ್ಳಿಯಲ್ಲಿ ೬೨೫ ಜನಸಂಖ್ಯೆ ಇದ್ದು ೫೫೦ ಮತದಾರರು ಇದ್ದಾರೆ. ತಿಮ್ಮನಹಳ್ಳಿಯಲ್ಲಿ ೭೯೦ ಜನಸಂಖ್ಯೆ ಇದ್ದು ೬೧೦ ಮತದಾರರು, ಎಕ್ಕೇಗೊಂದಿಯಲ್ಲಿ ೮೯೦ ಜನಸಂಖ್ಯೆ ಇದ್ದು ೭೦೦ ಮತದಾರರು, ಹಾಗೂ ರಾಮಸಾಗರಹಟ್ಟಿಯಲ್ಲಿ ೧೫೯೦ ಜನಸಂಖ್ಯೆ ಇದ್ದು ೧೪೯೯ ಮತದಾರರು ಇದ್ದಾರೆ. ಇಲ್ಲಿ ೧೦೦೦ಕ್ಕೆ ಗಂಡಸರಿಗೆ ೮೯೧ ರಷ್ಟು ಹೆಣ್ಣಿನ ಸಂಖ್ಯೆ ಕಂಡು ಬಂದಿದೆ.

ಸಾಮಾನ್ಯವಾಗಿ ಸಮತಟ್ಟಾದ ಭೂಮಿಯನ್ನು ಹೊಂದಿದ್ದು ಕೃಷಿಗೆ ಸ್ವಲ್ಪ ಪ್ರಮಾಣದಲ್ಲಿ ಸಹಾಯಕವಾಗಿದೆ. ಇಲ್ಲಿ ಕಂಡು ಬರುವ ಕೆಂಪು ಕಪ್ಪು (ರೇಗಲ್) ಹಾಗೂ ಸುಣ್ಣದ ಕಲ್ಲಿನ ಮಿಶ್ರಿತ ಮಣ್ಣಿನಿಂದ ಕೂಡಿದೆ. ಈ ಊರಿನ ಪೂರ್ವಕ್ಕೆ ರಾಮಸಾಗರಹಟ್ಟಿಯಿಂದ ತಿಮ್ಮನಹಳ್ಳಿಯ ಮೂಲಕ ಮೊಳಕಾಲ್ಮೂರು ತಾಲ್ಲೂಕು ಬರುತ್ತದೆ. ಉತ್ತರಕ್ಕೆ ಗುಡೇಕೋಟೆ ಮಾರ್ಗದಿಂದ ಅರಣ್ಯ ಪ್ರದೇಶವು ಕಂಡು ಬಂದಿದೆ. ಗುಡ್ಡಗಳು ಕಾಣಿಸಿಕೊಂಡಿವೆ, ಊರಿನ ಪಶ್ಚಿಮ ದಿಕ್ಕಿಗೆ ಕೂಡ್ಲಿಗಿ ತಾಲ್ಲೂಕು ಬರುತ್ತದೆ. ಇದು ಪ್ರಸಿದ್ಧ ಹುಣಸೆ ಮರಗಳಿಗೆ ಹೆಸರಾಗಿದೆ. ತಾಲ್ಲೂಕಿನ ಕೊನೆಯ ಹಳ್ಳಿಗಳಾಗಿ ಈ ಗ್ರಾಮಗಳು ಕಂಡು ಬರುತ್ತವೆ. ವಿಧಾನಸಭೆಯ ಕ್ಷೇತ್ರ ಕೂಡ್ಲಿಗಿ ವ್ಯಾಪ್ತಿಯಲ್ಲಿ ಬರುತ್ತವೆ. ದಿಬ್ಬದ ಹಳ್ಳಿಯಿಂದ ಎಡಗಡೆಗೆ ಪಶ್ಚಿಮ ದಿಕ್ಕಿಗೆ ಗಂಡಬೊಮ್ಮನಹಳ್ಳಿ ಗ್ರಾಮಪಂಚಾಯ್ತಿ ಕಂಡು ಬಂದಿದೆ. ಪಂಚಾಯ್ತಿಯ ಮುಂಭಾಗವು ಗಂಡಬೊಮ್ಮನಹಳ್ಳಿಕೆರೆ ಅಥವಾ ಪಾಮೂಬಂಡೆಕೆರೆ ಎಂದು ಪ್ರಸಿದ್ಧಿಯಾಗಿದೆ. ಈ ಕೆರೆಯ ಇತಿಹಾಸವು ಸುಮಾರು ೫೦-೬೦ ವರ್ಷಗಳ ಇತಿಹಾಸವಿದೆ. ಕೂಡ್ಲಿಗಿ ತಾಲ್ಲೂಕಿನ ಎರಡನೆ ದೊಡ್ಡಕೆರೆ ಇದಾಗಿದೆ. ಪೂರ್ವಕ್ಕೆ ಯರ್ರಗುಂಡಲಹಟ್ಟಿ ಗ್ರಾಮ ಬರುತ್ತದೆ. ಅದರ ಮುಂಭಾಗದಲ್ಲಿ ಶಿವಗಂಗೆಕೆರೆ ಕಂಡು ಬರುತ್ತದೆ. (ಮರುಕುಂಟೇಶ್ವರ ದೇವರ ಮೊದಲು ನೆಲೆಸಿರುವ ಸ್ಥಳ) ಈ ಕೆರೆಯ ಮೇಲೆ ವಿಗ್ರಹಗಳು ಮತ್ತು ವೀರಗಲ್ಲುಗಳು ಕಂಡು ಬಂದಿವೆ.

ಕೂಡ್ಲಿಗಿಯಿಂದ -ಮೊಳಕಾಲ್ಮೂರು ಮಾರ್ಗವಾಗಿ ಜಿಲ್ಲಾ ರಸ್ತೆಗಳು ಕಂಡು ಬಂದಿದೆ. ವಾಹನ ಸಂಚರಿಸಬಹುದಾದ ಸಂಚಾರಕ್ಕೆ ಯೋಗ್ಯವಾದ ಸರ್ವಋತು ರಸ್ತೆಗಳಿವೆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ,ಮತ್ತು ಖಾಸಗಿ ಸಾರಿಗೆ ವಾಹನಗಳ ವ್ಯವಸ್ಥೆಯು ಕಂಡು ಬಂದಿದೆ (ಕೂಡ್ಲಿಗಿ) ತಾಲ್ಲೂಕಿನಲ್ಲಿ ಕರ್ನಾಟಕ ಸಾರಿಗೆಯ ಬಸ್ ನಿಲ್ದಾಣ ಮತ್ತು 'ಡಿಪೋ' ಇದೆ.

### ೨.೧. ನೀರಾವರಿ

ಕೂಡ್ಲಿಗಿ ತಾಲ್ಲೂಕಿನಲ್ಲಿ ಯಾವುದೇ ಹೆಸರಾಂತ ನದಿಗಳ, ಕಾಲುವೆಗಳು ಕಂಡು ಬಂದಿಲ್ಲ ಕೆಲವು ಕೆರೆಗಳು ಮಾತ್ರ ಕಂಡು ಬರುತ್ತವೆ. ಗುಡೇಕೋಟೆಗೆ ಸುಮಾರು ೧೨ ಕಿ ಮೀ ದೂರದಲ್ಲಿ ಇರುವ ಗಂಡಬೊಮ್ಮನ ಹಳ್ಳಿ ಬಳಿ ಅಪಾರ ವೆಚ್ಚದ ಹಳ್ಳಕ್ಕೆ ನಿರ್ಮಿಸಲಾಗಿರುವ ಮಧ್ಯಮ ಪ್ರಮಾಣದ ನೀರಾವರಿ ಯೋಜನೆ ಪ್ರಮುಖವಾದುದು ಏಕಮಾತ್ರ ನೀರಾವರಿ ಯೋಜನೆಯಾಗಿದೆ. ಇದರಿಂದ ಈ ಪ್ರದೇಶಗಳ ಅಥವಾ ಈ ಗ್ರಾಮಗಳ ಸುಮಾರು ೪೦೦೦ ಎಕರೆ ಭೂಮಿಯು ನೀರಾವರಿಯಾಗುತ್ತದೆ

ಮುಖ್ಯವಾಗಿ ಮಣ್ಣಿನ ಗೋಡೆ ನಿರ್ಮಿಸಿ ಕಟ್ಟಲಾಗಿರುವ ಈ ಅಣೆಕಟ್ಟಿನ ಉತ್ತರ ಸುಮಾರು ೨೧.೧೮ ಅಡಿ ಮತ್ತು ಉದ್ದ ಸುಮಾರು ೩೬೫೮ ಅಡಿಯಾಗಿದ್ದು ಇದರಲ್ಲಿ ೨೮೯ ಮೀ ೮೧ ಕ್ಯೂಸೆಕ್ಸ್ ಅಡಿ ನೀರು ಸಂಗ್ರಹವಾಗುತ್ತದೆ. ಅಣೆಕಟ್ಟಿನ ಜಲಾವೃತ ಪ್ರದೇಶ ಸುಮಾರು ೪೫೦ ಎಕರೆಗಳು ಈ ಅಣೆಕಟ್ಟಿಗೆ ಎರಡು ದಂಡೆಗಳಲ್ಲಿ ಇವೆ. ಸುಮಾರು ೧೬ ಕಿಮೀ ಉದ್ದ ಕಾಲುವೆಗಳನ್ನು ತೊಡಲಾಗಿದ್ದು ಅವುಗಳಿಂದ ಹೊಲಗಳಿಗೆ ನೀರನ್ನು ಬೇಸಿಗೆ ಸಮಯದಲ್ಲಿ ಹಾಯಿಸಲಾಗುತ್ತದೆ. ಇದ. ಎಡದಂಡೆ ಕಾಲುವೆಯಿಂದ ಸುಮಾರು ೨೯.೬೦ ಎಕರೆ ಭೂಮಿಗೂ ಬಲದಂಡೆ ಕಾಲುವೆಯಿಂದ ಸುಮಾರು ೨೬,೬೮ ಎಕರೆ ಭೂ ಪ್ರದೇಶಕ್ಕೂ ನೀರಾವರಿ ಸೌಲಭ್ಯ ದೊರೆಯುತ್ತದೆ. ಈ ಯೋಜನೆಯಿಂದ ನೀರಾವರಿ ಸೌಲಭ್ಯ ಪಡೆಯುವ ಹಳ್ಳಿಗಳೆಂದರೆ ಎಕ್ಕೇಗೊಂದಿ, ದಿಬ್ಬದಹಳ್ಳಿ, ತಿಮ್ಮನಹಳ್ಳಿ, ನಡುವಲಹಳ್ಳಿ, ರಾಮಸಾಗರ ಹಟ್ಟಿ, ಸುಂಕನಹಳ್ಳಿ, ಮಾರಮ್ಮನ ಹಳ್ಳಿ, ಹುರುಡಿಹಳಿ ಮತ್ತು ಕಾಸಪುರ, ಗ್ರಾಮಗಳು

**ಪರಿಸರ**

ಈ ತಾಲ್ಲೂಕಿನಲ್ಲಿ ಬೆಟ್ಟಗುಡ್ಡಗಳಿಂದ ತುಂಬಿದ ಸಾಲಿನಂತೆ ಅಲ್ಲಲ್ಲಿ ಕಂಡು ಬಂದಿವೆ. ಮತ್ತು ಕೆಲವು ಪ್ರದೇಶದಲ್ಲಿ ಬಯಲು ಸೀಮೆಯ ಪ್ರದೇಶವಾಗಿ ಕಂಡು ಬಂದಿದೆ. ಬೆಟ್ಟಗಳು (ಬಂಡೆ) ಬಂಡೆಗಳಿಂದ ಮನೆ ಕಟ್ಟಲಿಕ್ಕೆ ಉಪಯೋಗಿಸುವ ಕಲ್ಲುಗಳನ್ನು ಕಡಿಯುತ್ತಾರೆ ಗುಡೇಕೋಟೆ ರಸ್ತೆಯ ಬಳಿ ಯರಬಾಯ್ಯನ ಕಟ್ಟೆಯ ಹತ್ತಿರ ಜನರು ಬಂಡೆ ಸುಟ್ಟು ಜೆಲ್ಲೆ ಹೊಡೆಯುತ್ತಾರೆ ಇದು ವಿವಿಧ ತಾಲ್ಲೂಕುಗಳಿಗೆ ರಫ್ತು ಆಗುತ್ತದೆ. ಈ ಊರುಗಳ ಕೆಲವು ಹಳ್ಳಿಗಳಲ್ಲಿ ಮಾತ್ರ ಈ ಕೆಲಸ ಮಾಡುತ್ತಾರೆ. ಉಳಿದವರಿಗೆ ವ್ಯವಸಾಯ (ಕೃಷಿ) ವಾಗಿದ್ದರೂ ಕೂಲಿಯಿಂದ ಜೀವನವನ್ನು ಅವಲಂಭಿಸಿದ್ದಾರೆ. ಆದ್ದರಿಂದ ಜನರು ಕೆಲಸಗಳಿಗೆ ಬೇರೆ ಬೇರೆ ನಗರಗಳಿಗೆ ವಲಸೆ ಹೋಗುತ್ತಾರೆ ಬಳ್ಳಾರಿ, ಚಿತ್ರದುರ್ಗ,ಸಂಡೂರು, ದಾವಣಗೆರೆ, ಬೆಂಗಳೂರು ಇಂತಹ ನಗರಗಳಿಗೆ ಜೀವನ ನಡೆಸಲು ಹೋಗುತ್ತಾರೆ

ಈ ಗ್ರಾಮಗಳಲ್ಲಿ ವಿವಿಧ ರೀತಿ. ಜಾತಿ ಜನಾಂಗದವರು ವಾಸಮಾಡುತ್ತಾರೆ ಅವರು ಆಯಾ ಕಸುಬುಗಳಿಗನುಗುಣವಾಗಿ ಗ್ರಾಮಗಳಲ್ಲಿ ವಾಸಮಾಡುತ್ತಾರೆ ಉದಾ.- ಮ್ಯಾಸನಾಯಕರು, ಜಂಗಮರು, ಮಾದಿಗರು, ಸಲ್ಪರು, ಲಿಂಗಾಯ್ತಿರು, ಐನರು. ಒಡ್ಡರು ಮತ್ತು ಕುಂಬಾರ ಜನಾಂಗದವರು ವಾಸ ಮಾಡುತ್ತಾರೆ

ಇಲ್ಲಿಯ ಭಾಷೆಯು ಗ್ರಾಮೀಣ ಶೈಲಿಯ ಹಾಡು ಭಾಷೆಯ ರೂಪದಲ್ಲಿ ಕನ್ನಡ, ತೆಲುಗು, ಮಿಶ್ರಿತವಾದ ಭಾಷೆಯಾಗಿದೆ. ಸರಿಯಾದ ವಾಹನ ಸೌಲಭ್ಯಗಳು ಕೆಲವು ವರ್ಷಗಳಿಂದ ಸುಧಾರಿಸಿದೆ. ಏಕೆಂದರೆ ಚಿಕ್ಕ ಬೋಗಿಹಳ್ಳಿಯು ಎ.ಪಿ.ಎಂ.ಸಿ ಮಾರುಕಟ್ಟೆ ಆರಂಭವಾಗಿದ್ದರಿಂದ ಚಿತ್ರದುರ್ಗ, ಚೆಳ್ಳಕೆರೆ, ಮೊಳಕಾಲ್ಮೂರುಗಳಂತ ನಗರಗಳ ಹತ್ತಿರ ಇರುವುದರಿಂದ ವಾಹನಗಳು ಓಡಾಡುತ್ತವೆ.

ಈ ಗ್ರಾಮಗಳು ಮಳೆಯನ್ನೇ ನಂಬಿ ಜೀವನ ಮಾಡುವಂತಹ ಗ್ರಾಮಗಳು ಆಗಿವೆ. ದೈನಂದಿನ ವ್ಯವಹಾರದ ಉಪಕಸುಬುಗಳನ್ನು ಜನರು ಅವಲಂಬಿಸಿರುತ್ತಾರೆ. ಈ ಗ್ರಾಮಗಳು ಗೊಬ್ಬರ ಔಷಧಿ

ಇತರೆ ವಸ್ತುಗಳ ಖರೀದಿಗೆ ಮೊಳಕಾಲ್ಮೂರಿಗೆ ಹೋಗುತ್ತಾರೆ ನಂತರ ಸರ್ಕಾರಿ ಕೆಲಸಗಳಾದ ಕೋರ್ಟ್ ಕಛೇರಿ ಕೆಲಸಗಳಿಗೆ ತಾಲ್ಲೂಕಿಗೆ ಕೂಡ್ಲಿಗಿ ಹೋಗುತ್ತಾರೆ.

ಸಂತೆಗೆ ಆಹಾರ ಧಾನ್ಯಕ್ಕೆ ಮತ್ತು ಕೃಷಿ ವಸ್ತುಗಳಿಗಾಗಿ, ಮೊಳಕಾಲ್ಮೂರು, ಚಿತ್ರದುರ್ಗ, ರಾಯದುರ್ಗ, ಚಳ್ಳಕೇರಿಗಳಂತ ಹನಗರಗಳಿಗೆ ಜನರು ಹೋಗುತ್ತಾರೆ. ಈ ರೀತಿಯಾಗಿ ನೆರೆಹೊರೆಯ ಸಂಪರ್ಕಗಳಿಂದ ಕೂಡಿದೆ. ಊರಿಗೆ ಬರುವ ದಿನ ಪತ್ರಿಕೆ, ರೇಡಿಯೋ, ಟೆಲಿವಿಷನ್, ಟೆಲಿಫೋನ್, ಮೋಬೈಲ್, ಸೌಲಭ್ಯಗಳ ಹೊರ ಜಗತ್ತಿನ ವಿಷಯವು ಅತ್ಯಂತ ಪರಿಣಾಮಕಾರಿಯಾಗಿದೆ. ಶೈಕ್ಷಣಿಕವಾಗಿ ಗ್ರಾಮಗಳಿಗೆ ಹೈಸ್ಕೂಲ್ ರಾಮಸಾಗರ ಹಟ್ಟಿ, ಚಿರತಗುಂಡು ಗ್ರಾಮಗಳಿಗೆ ೨ ಅಥವಾ ೪ ಕಿ.ಮಿ. ನಡೆದು ಹೋಗುತ್ತಾರೆ. ಕಳೆದ ಎರಡು ವರ್ಷಗಳಿಂದ ರಾಜ್ಯಸರ್ಕಾರ ವಿದ್ಯಾರ್ಥಿಗಳಿಗೆ ಉಚಿತ ಬೈಸಿಕಲ್ಲು ವಿತರಣೆ ಮಾಡಿ ಒಳ್ಳೆಯ ಸೌಲಭ್ಯ ಕಲ್ಪಿಸಿ ಕೊಟ್ಟಿದೆ. ಇದರಿಂದ ಗ್ರಾಮೀಣ ಮಟ್ಟದಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದಂತೆ ಆಗಿದೆ. ಗ್ರಾಮೀಣ ಜನರು ಇತ್ತೀಚಿಗೆ ಸರ್ಕಾರ ಆದೇಶದ ಮೇರಿಗೆ, ಹೋಬಳಿ ಗ್ರಾಮವಾದ ಗುಡೇಕೋಟೆಗೆ ಕೃಷಿಯ ದಾಖಲು ಪತ್ರಗಳು ಶಿಕ್ಷಣಕ್ಕೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಸಂಬಂಧಿಸಿದಂತೆ ಹೋಬಳಿ ಗ್ರಾಮಕ್ಕೆ ಹೋಗುತ್ತಾರೆ. ಅಲ್ಲಿಯೂ ವಾಹನ ಸೌಕರ್ಯ ಚೆನ್ನಾಗಿದೆ.

## ನೆಲ ಜಲ

ಪೂರ್ವಕಾಲದಲ್ಲಿ ಒಂದು ಗ್ರಾಮ ನಿರ್ಮಾಣ ಮಾಡುವ ಸಮಯದಲ್ಲಿ ಅಲ್ಲಿ ಕಂಡು ಬರುವ ಎಲ್ಲಾ ರೀತಿಯ ಸೌಲಭ್ಯವನ್ನು ನೋಡಿ ಆ ಗ್ರಾಮಕ್ಕೆ ಅಡಿಗಲ್ಲು ಹಾಕುತ್ತಿದ್ದರೂ. ನೀರಿನ ಸೌಲಭ್ಯ ಮತ್ತು ಪರಿಸರ ಸುರಕ್ಷತೆ ಮಾರ್ಗಗಳು ಮುಖ್ಯವಾಗಿ ಕಂಡು ಬಂದಿರುತ್ತವೆ. ಈ ಗ್ರಾಮಗಳಲ್ಲಿ ಬಯಲು ಸೀಮಿಯ ಒಂದು ಭಾಗವಾದ ಗ್ರಾಮಗಳು ಭೂಮಿಯು ಸಮತಟ್ಟವಾಗಿಲ್ಲ ಒಂದು ಕಡೆ ಎತ್ತರ ಮತ್ತೊಂದು ಕಡೆ, ತಗ್ಗು ಇನ್ನೊಂದು ಕಡೆ ಜೌಗೂ ಭೂಮಿಯಿಂದ ಮರಳುನಿಂದ ಕೂಡಿಬಂದಿದೆ. ಕೆಲವು ಪ್ರದೇಶದಲ್ಲಿ ಹೊರ ವಲಯದ ಹೊಲದ ಬಯಲು ಬಿಡುತ್ತಿದ್ದಂತೆ ಪ್ರಾರಂಭವಾಗುವ ಕೆಲವು ನೀರಾವರಿ ಸೌಲಭ್ಯಗಳು ಕಂಡು ಬಂದಿದೆ. ದನ ಕುರಿ, ಮೇಕೆ, ಮುಂತಾದ ಸಾಕು ಪ್ರಾಣಿಗಳ ತಾಣವಾಗಿದೆ. ಏಕೆಂದರೆ ಅರಣ್ಯವು ಸಹ ಅಭಿವೃದ್ಧಿ ಹೊಂದಿದೆ ಕೆಲವು ಕಡೆ ಮರಳು ಭೂಮಿಯಿಂದ ಸುಣ್ಣ ಮಿಶ್ರಿತ ಮಣ್ಣು ಕಂಡುಬಂದಿದೆ.

## ೨.೨. ಬೆಳೆಗಳು

ಈ ಪ್ರದೇಶಗಳಲ್ಲಿ ಮುಖ್ಯವಾಗಿ ಕಂಡುಬರುವ ಬೆಳೆಗಳೆಂದರೆ ಶೇಂಗಾ, ರಾಗಿ, ಸೂರ್ಯಕಾಂತಿ, ಹತ್ತಿ, ಈರುಳ್ಳಿ, ಜೋಳ, ನವಣೆ, ಸಜ್ಜೆ, ಎಳ್ಳು, ನೆಲಗಡಲೆ, ಭತ್ತ, ಹಲಸಂದಿ, ಹುರುಳಿ, ಮುಂತಾದ ಬೆಳೆಗಳು ಕಂಡುಬರುತ್ತವೆ. ಇದರಲ್ಲಿ ಕೆಲವು ಆರ್ಥಿಕ ಬೆಳೆಗಳು ಮತ್ತು ಕೆಲವು ಆಹಾರಕ್ಕಾಗಿ ಉಪಯೋಗಿಸುವ ಬೆಳೆಗಳಾಗಿರುತ್ತವೆ. ಜಾಸ್ತಿ ಮಳೆ ಬೀಳುವ ಪ್ರದೇಶದಲ್ಲಿ ಶೇಂಗಾ, ಹತ್ತಿ, ರಾಗಿ,

ಜೋಳ, ಬೆಳೆದರೆ. ಕಡಿಮೆ ಮಳೆ ಬೀಳುವ ಪ್ರದೇಶದಲ್ಲಿ ನವಣೆ, ಸಜ್ಜೆ, ಹುರುಳಿ ಹೆಸರುಗಳಂತಹ ಬೆಳೆಗಳನ್ನು ಬೆಳೆಯುತ್ತಾರೆ.

**ಸಸ್ಯ ಸಂಪತ್ತು**

ಸಸ್ಯ ಸಂಪತ್ತು ಈ ಗ್ರಾಮಗಳಲ್ಲಿ ಅಲ್ಪ ಸಲ್ಪ ಕಂಡುಬಂದಿದೆ. ಇಲ್ಲಿ ಕೆಲವು ಹೆಸರು ಗೊತ್ತಿರುವ ಗಿಡಮರಗಳಂತ ಗೊತ್ತಿಲ್ಲದ ಗಿಡಮರಗಳೇ ಹೆಚ್ಚಾಗಿ ಕಂಡು ಬರುತ್ತವೆ. ಇದು ಕೆಲವು ಬಯಲು ಪ್ರದೇಶದಿಂದ ಕೂಡಿದರೂ ಕೆಲವು ಪ್ರದೇಶಗಳಿಗೆ ಮಳೆ ಕಡಿಮೆ ಬೀಳುತ್ತದೆ. ಮರಗಿಡಗಳು ಪ್ರಮಾಣ ಸಾಧಾರಣವಾಗಿ ಕಂಡುಬಂದಿವೆ. ಸರ್ಕಾರವು ರಸ್ತೆ ನಿರ್ಮಾಣ ಮಾಡುವ ಸಂದರ್ಭದಲ್ಲಿ ರಸ್ತೆಯ ಪಕ್ಕದಲ್ಲಿ ಡಿಸೆಲ್ ಗಿಡಗಳು, (ಅವುಡಗಿಡ) ಬೇವಿನ ಗಿಡಗಳನ್ನು ಹಾಕಿದ್ದಾರೆ. ಈ ಪ್ರದೇಶದಲ್ಲಿ ಅಲ್ಲಲ್ಲಿ ದೊಡ್ಡ ರೈತರು ತೆಂಗಿನ ಮರಗಳನ್ನು ತಮ್ಮ ಜಮೀನಿನಲ್ಲಿ ಹಾಕಿದ್ದಾರೆ. ಮಳೆಗಾಲದಲ್ಲಿ ಹೊಲದ ಬಯಲಿನಲ್ಲಿ ಬೆಳೆಯುವ ಕಳೆ, ಸಸ್ಯಗಳು ಒಂದು ಕಡೆ ದನಗಳಿಗೆ ಮೇವು ಆದರೆ ಇನ್ನೊಂದೆಡೆ ಬೆರಕೆ ಸೊಪ್ಪನ ಹಸರಿನಲ್ಲಿ ರುಚಿಯಾದ ಸಾಂಬಾರು (ಗುರುಗೆ ಸೊಪ್ಪು ಗೋಣಿ ಸೊಪ್ಪು) ಮಾಡಲು ಬಳಕೆ ಮಾಡುಕೊಳ್ಳುತ್ತಾರೆ.

ಈ ಗ್ರಾಮಗಳಲ್ಲಿ ಸುತ್ತಲು ಕಳ್ಳಿಯ ಗಿಡ ಮರಗಳ, ತುಗ್ಗಲಿಗಿಡಗಳು ಕಂಡುಬಂದಿವೆ. ಮತ್ತೆ ಅರಣ್ಯ ಮತ್ತು ಕೆಲವು ಗುಡ್ಡಗಾಡುಗಳಿಗೆ ಹೋದರೆ ಸೀತಾಫಲಹಣ್ಣಿನ ಗಿಡಗಳು, ತುಗ್ಗಲಿಗಿಡಗಳು, ಬಂದರೇಗಿಡ ದಮ್‌ಗಳ್ಳಿ, ಕೊಲ್‌ಗ್ಳಿ, ಮಸಿಬೇಳವ ಮರಗಳು, ಪಚ್ಚರಿ ಮರಗಳು ವಿವಿಧ ಜಾತಿಯ ಮರಗಳು ಕಂಡು ಬಂದಿವೆ. ಗುಡೇಕೋಟೆ ಗುಡ್ಡಗಳು ಸೀತಾಫಲ ಹಣ್ಣುಗಳಿಗೆ ಹೆಸರಾಗಿರುತ್ತದೆ. ಊರಿನ ಪಕ್ಕದ ಕಳ್ಳಿಮರದ ಹಾಲು ಕಣ್ಣಲ್ಲಿ ಬಿದ್ದರೆ ಕಣ್ಣೆ ಹೋಗುತ್ತದೆ. ಎಂಬ ಭಯ ಜನರಲ್ಲಿ ಮೂಡಿದೆ. ಈ ಕಳ್ಳಿಗಿಡದಲ್ಲಿ ಅಂಟು (ಪೇವಿಕಲ್) ಇರುವುದಲ್ಲಿ ಗ್ರಾಮೀಣ ಮಟ್ಟದ ಶಾಲಾ ಮಕ್ಕಳು ಪುಸ್ತಕ ಹರಿದಾಗ ಗಿಡದ ಹಾಲನ್ನೇ, ಉಪಯೋಗಿಸುತ್ತಾರೆ. ಮತ್ತೆ ಗ್ರಾಮ ಜನರು ಬೇರೆ ರೀತಿಯ ಮರಗಳನ್ನು ಹೊಲದಲ್ಲಿ ಅಥವಾ ಮನೆಯ ಮುಂದೆ ಹಾಗೂ ಕಣಗಳಲ್ಲಿ ಬೆಳೆಸಿಕೊಳ್ಳುತ್ತಾರೆ. ಇವು ಅವರ ಬದುಕಿನಲ್ಲಿ ಕೃಷಿ ಸಾಮಾನುಗಳಿಗೆ ಅಥವಾ ಮನೆಯನ್ನು ಕಟ್ಟಿಕೊಳ್ಳುವುದಕ್ಕೆ ಬಳಸಿಕೊಳ್ಳುತ್ತಾರೆ. (ಬೇವಿನ ಮರ, ನೀಲಗಿರಿಮರ, ಜಾಲಿಮರ, ಹುಣಿಸೆ) ಇದರಿಂದ ಕಡಿಮೆ ಖರ್ಚಿನಲ್ಲಿ ಹೆಚ್ಚು ಹಣಕಾಣುವ ಅಪೇಕ್ಷೆ ಹೆಚ್ಚಾಗುತ್ತಿದ್ದು ಅದಕ್ಕಾಗ ವ್ಯವಸಾಯಕ್ಕ ಜಮೀನಿನಲ್ಲಿ ಇಂತಹ ಮರಗಳನ್ನು ಬೆಳೆಸಿರುತ್ತಾರೆ.

**ಸಾಕುಪ್ರಾಣಿ**

ಸಾಕುಪ್ರಾಣಿಗಳ ಕಡೆ ಬಂದರೆ ನಿಸರ್ಗದ ಜೊತೆಗೆ ಮನುಷ್ಯನು ಯಾವ ರೀತಿಯ ಬದುಕುವ ಮಾರ್ಗದಿಂದ ತಮ್ಮ ಇನ್ನೊಂದು ಕಸುಬನ್ನು ಉಪಜೀವನಕ್ಕಾಗಿ ಸಾಕು ಪ್ರಾಣಿಗಳನ್ನು ಸಾಕುತ್ತಾ ಬಂದನು. ರೈತರಿಗೆ ಮಳೆಯಿಂದ ಬೆಳೆದಷ್ಟು ಹಣವನ್ನು ದನ ಕರಗಳು, ಕುರಿಗಳಿಂದ ಆದಾಯ

ಬರುತ್ತದೆ. ಈ ಗ್ರಾಮಗಳಲ್ಲಿ ಕಂಡು ಬರುವ ಸಾಕು ಪ್ರಾಣಿಗಳು ದನ, ಕುರಿ, ಮೇಕೆ (ಆಡು), ಎಮ್ಮೆ, ಇವುಗಳನ್ನು ಹೆಚ್ಚಾಗಿ ಸಾಕುತ್ತಾರೆ. ಇದು ಜಮೀನು ಇಲ್ಲದವರ ಮುಖ್ಯ ಉದ್ಯೋಗ ಈ ಹೈನುಗಾರಿಕೆಯಾಗಿದೆ.

ದನ, ಎಮ್ಮೆಗಳು ಹಾಲು ಉತ್ಪನ್ನಕ್ಕೆ ಹಾಗೂ ಗೊಬ್ಬರದ ಕಾರಣಕ್ಕಾಗಿ ಕೆಲವರು ಕುರಿ, ಆಡು, ಸಾಕುತ್ತಾರೆ. ಕುರಿ, ಆಡು ಇದ್ದರೆ ಮನೆಯಲ್ಲಿ ನಗದು ಹಣ ಇದ್ದಹಾಗೇ ಎಂದು ತಿಳಿದ, ವ್ಯಾವಸಾಯದ ಜೊತೆಗೆ ಅಥವಾ ಕೂಲಿಯ ಜೊತೆಗೆ ಇದನ್ನು ಉಪಕಸುಬನ್ನಾಗಿ ರೈತರು ಮಾಡಿಕೊಂಡರು. ಕುರಿ, ಉಣ್ಣೆ, ಗೊಬ್ಬರ, ಜಾತ್ರೆ ಸಮಯಕ್ಕೆ ತಿನ್ನಲು ಉಪಯೋಗಿಸುತ್ತಾರೆ. ಗೊಬ್ಬರ ಒಂದು ಕಡೆಯಿಂದದ ಮತ್ತೊಂದು ಕಡೆ ರಫ್ತು ಮಾಡುತ್ತಾರೆ. ಕೆಲವರು ತನ್ನ ಸ್ವಂತ ಜಮೀನಿಗೆ ಹಾಕುತ್ತಾರೆ.

ಸಮಾಜದಲ್ಲಿ ಕಂಡುಬರುವ ಪ್ರದೇಶಗಳ ಹಾಗೂ ಪಟ್ಟಣಗಳು ಇತಿಹಾಸ ತಿಳಿಯುವುದಕ್ಕಿಂತ ಮೊದಲು ಅಲ್ಲಿನ ಭೌಗೋಳಿಕ ಸನ್ನಿವೇಶದ ವಿವರ ತಿಳಿದುಕೊಳ್ಳುವುದು ಒಳ್ಳೆಯದು ಇಲ್ಲವಾದರೆ ಅಲ್ಲಿನ ಚರಿತ್ರೆ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗುವುದಿಲ್ಲ ಸಾಮಾನ್ಯವಾಗಿ ಒಂದು ಪ್ರದೇಶ ಜನಾಂಗದ ಜೀವನ ವಿಧಾನವನ್ನು ಈ ಭೌಗೋಳಿಕ ಲಕ್ಷಣಗಳು ರೂಪಿಸುತ್ತವೆ. ಈ ಒಂದು ಸಂಸ್ಕೃತಿಯ ಬೆಳವಣಿಗೆಗೂ ಕಾರಣವಾಗುತ್ತವೆ.

ಪ್ರಸ್ತುತ ಗುಡೇಕೋಟೆ ಹೋಬಳಿಯಲ್ಲಿ ಬರುವ ಕೆಲವು ಗ್ರಾಮಗಳಾದ ತಿಮ್ಮನಹಳ್ಳಿ, ದಿಬ್ಬದಹಳ್ಳಿ, ಎಕ್ಕೆಗೊಂದಿ, ಗ್ರಾಮಗಳು ಚರಿತ್ರೆ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ತೊಡುಗುವ ಮೊದಲು ಈ ಗ್ರಾಮಗಳ ಭೌಗೋಳಿಕ ವಿವರಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಒಂದು ಪ್ರದೇಶ ಗ್ರಾಮೀಣ ಸಂಸ್ಕೃತಿಯ ಉಗಮ ಮತ್ತು ವಿಕಾಸವು ಅಲ್ಲಿನ ಭೂ ಪ್ರದೇಶಗಳಾದ ನದಿ, ಬೆಟ್ಟ, ಹಳ್ಳಿ, ಗ್ರಾಮ, ಅರಣ್ಯ ಮತ್ತು ಕಾಡುಗಳಿಂದ ಆವೃತವಾಗಿರುತ್ತವೆ. ಆ ಮೂಲಕ ಭೌಗೋಳಿಕ ಭಾಷೆಯ ಹಿನ್ನೆಲೆಯಲ್ಲಿ ಸಾಮಾಜಿಕ, ಶೈಕ್ಷಣಿಕ, ಅಂಶಗಳನ್ನು ಅವಲಂಬಿಸಿಕೊಂಡಿರುತ್ತವೆ. ಭೌಗೋಳಿಕ ಅಂಶಗಳನ್ನು ಅಧ್ಯಯನದ ಸ್ವರೂಪದಲ್ಲಿ ರೂಪಿಸಿಕೊಳ್ಳಬೇಕಾಗುವುದು.

ದಿಬ್ಬದಹಳ್ಳಿ ಗ್ರಾಮವು ಮೂಲತಃ ಗೌಡ ಗಂಚಿಕರ ಎಂಬುವರ ಆಡಳಿತಕ್ಕೆ ಒಳಪಟ್ಟಿತ್ತು. ಈಗಿರುವ ಸ್ಥಳದಿಂದ ಪೂರ್ವಕ್ಕೆ ೧ ಕಿ.ಮೀ, ದೂರದಲ್ಲಿರುವ ಶಿವಗಂಗೆಯಲ್ಲಿ ಸಣ್ಣಪುಟ್ಟ ಮರಗಿಡಗಳ ಕಂಡುಬಂದವೆ. ಅಲ್ಲಿ ಸಮೃದ್ಧವಾದ ಜಲ, ನೆಲೆ, ಇವೆ. ಅದಕ್ಕಾಗಿ ಶ್ರೀ ಮರುಕುಂಡ್ಲೇಶ್ವರ ದೇವರು ತಾನಾಗಿ ಆಕಾಶಮಾರ್ಗದಿಂದ ಬಂದು ಅಲ್ಲಿ ನೆಲೆಸಿದ್ದಾನೆ. ಆ ನೆಲೆಸಿದ ಕ್ಷಣ ಪಾಪಯ್ಯವೆಂಬ ವ್ಯಕ್ತಿಯು ದನ ಮೇಯಿಸಲಕ್ಕೆ ಹೋದಾಗ ಅವನಿಗೆ ಪ್ರಜ್ಞೆ ತಪ್ಪಿ ನೆಲಕ್ಕೆ ಬಿದ್ದನು. ನಂತರ ಎಚ್ಚರವಾದ ಮೇಲೆ ಈ ದೇವರನ್ನು ಪ್ರತ್ಯಕ್ಷವಾಗಿ ಕಂಡನು. ತಾನು ನಾಯಕ ಜಾತಿಯಿಂದ ಕೂಡಿರುವುದರಿಂದ ಉಚ್ಚಜಾತಿಗಳಾದ ಜಂಗಮರನ್ನು ಕರಿಸಿ ಮೊದಲ ಪೂಜೆ ಮಾಡಿಸಿದನು. ಆದರ ಕಾರ್ಯಕೆಲಸ ಕೆಳಜಾತಿಗಳಾದ ಪಂಚಮರು (ಹರಿಜನರು) ಮಾದಿಗರು ಕೈಯಲ್ಲಿ ಮಾಡಿಸಿದನು. ಅದು ಕ್ರಮೇಣ ಮುಂದುವರೆಯುತ್ತ ಬಂತು.

ಪಾಪಯ್ಯ ಮತ್ತು ಯರ್ರಯ್ಯ ಸೋದರರು ದನ ಕಾಯುವ ಕಿಲಾರಿಗಳಾಗಿ ಮುಂದುವರೆದರು. ಆ ಜಾಗದಲ್ಲಿ ಊರಿನ ಜನರು ಮತ್ತು ಸುತ್ತಲೂರಿನ ಜನರು ಸೇರಿ ಆ ಸ್ಥಳಕ್ಕೆ ಕಟ್ಟಡ ಕಟ್ಟಿದರು ಅದನ್ನು "ಶಿವಗಂಗೆ ಅಥವಾ ದೇವಾಗಂಗೆ" ಎಂದು ಕರೆದರು. ಇದು ಕೆಲವು ಹಿರಿಯರ ಪ್ರಕಾರ ನೆಲೆಗೊಂಡಿರುವುದು.

ಈ ಗ್ರಾಮಗಳು ಗುಡೇಕೋಟೆ ಹೋಬಳಿಯ ವ್ಯಾಪ್ತಿಯಲ್ಲಿ ಬರುತ್ತವೆ. ಪ್ರತಿಯೊಂದು ಸೌಲಭ್ಯಕ್ಕೆ ಗುಡೇಕೋಟೆ ಕೇಂದ್ರ ಸ್ಥಳವಾಗಿರುತ್ತದೆ. ಆರೋಗ್ಯ ಕೇಂದ್ರಕ್ಕೆ ಶಿಕ್ಷಣ ಸಂಬಂಧಪಟ್ಟ ದಾಖಲೆಗಳಿಗೆ ಜಮೀನಿನ ಲೆಕ್ಕ ಪತ್ರಗಳಿಗೆ ಕೂಡ್ಲಿಗಿ ತಾಲ್ಲೂಕು ಬಿಟ್ಟರೆ ಎಲ್ಲಾ ಗುಡೇಕೋಟೆಯ ನೆಮ್ಮದಿ ಕೇಂದ್ರಕ್ಕೆ ಬೇಟಿ ಕೊಡುತ್ತಾರೆ. ಕೂಡ್ಲಿಗಿ ತಾಲೂಕಿನ ಗುಡೇಕೋಟಯಲ್ಲಿ ಕೃಷಿ, ಅಭಿವೃದ್ಧಿ ಬ್ಯಾಂಕ್ ಮತ್ತು ಸಿಂಡಿಕೇಟ್‌ಬ್ಯಾಂಕ್‌ಗಳು ಸಹಕಾರಿ ಪತ್ತಿನ ಸಂಘಗಳು ಕಂಡುಬಂದಿವೆ. ಒಟ್ಟಾರೆಯಾಗಿ ಈ ಗ್ರಾಮಗಳು ಭೌಗೋಳಿಕ ಪರಿಸರವು ಕೇವಲ ನೈಸರ್ಗಿಕ ಸ್ಥಿತಿಗೆ ನೇಮಿತವಾಗಿರದೆ ಧಾರ್ಮಿಕ ಶೈಕ್ಷಣಿಕ, ರಾಜಕೀಯ, ಆಡಳಿತ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ರಚಿಸಲ್ಪಟ್ಟಿದೆ ಎಂದು ಹೇಳಬಹುದು.

## ಅಡಿಟಿಪ್ಪಣಿ

೧. ಡಾ.ಶ್ರೀ.ರಾಮ ಇಟ್ಟಪ್ಪ, ಗ್ರಾಮೀಣ ಸಮುದಾಯದ ವಿವಿಧ ಮುಖ, ಜನಪದ ಗೃಹಿಕೆ ಪರಿಕಲ್ಪನೆ, ಪುಟ - ೯೬

* * *

# ಅಧ್ಯಾಯ - ಮೂರು

## ದೇವರ ಭೌತಿಕ ವಿವರ

ಜಾನಪದ ಮತ್ತು ದೇಶಿ ಎಂಬ ಎರಡು ಪರಿಕಲ್ಪನೆಗಳ ಬಗ್ಗೆ ನಮ್ಮ ಕೆಲವು ಜಾನಪದ ತಜ್ಞರು ಮಾತನಾಡುತ್ತಾರೆ. ನಮ್ಮ ನವೋದಯ ಸಾಹಿತ್ಯಗಳಲ್ಲಿ ದೇಶ ದೇಶೀಯತೆ ಮತ್ತು ದೇಶಿ ಎಂಬ ಪರಿಕಲ್ಪನೆಗಳು ಬಳಕೆಯಾಗಿವೆ. ಇವರಲ್ಲಿ ಭಾಷಾ ದೇಶಿ, ಸ್ವದೇಶಿ, ಮತ್ತು ಸ್ವತಂತ್ರ ದೇಶಿಗಳೆಂಬ ಭಿನ್ನ ನೆಲೆಯ ಪರಿಕಲ್ಪನೆಗೆ ಸೇರಿದವರಿದ್ದಾರೆ. ಬಿ.ಎಂ.ಶ್ರೀ, ದ.ರಾ.ಬೇಂದ್ರೆ ಬೆಟಗೇರಿ, ಕೃಷ್ಣಶರ್ಮ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ದೇವುಡ, ನರಸಿಂಹಶಾಸ್ತ್ರಿ ಈ ಮುಂತಾದವರು ಭಾಷಾ ದೇಶಿ ಬಗ್ಗೆ ಮಾತನಾಡುತ್ತ ಸಂಸ್ಕೃತಿ ದೇಶಿ ಕಡೆಗೆ ಚಲಿಸುತ್ತಾರೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅಂಥವರು ಮಾತನಾಡುವ ದೇಶಿ ಭಾಷಾಸಾಹಿತ್ಯಕ್ಕಿಂತ ಆಚೆಗಿನ ಗ್ರಾಮಸ್ವರಾಜ್ಯಕ್ಕೆ ಸಂಬಂಧಿಸಿದುದಾಗಿದೆ. ಈ ಎಲ್ಲ ದೇಶಿ ಅಭಿವೃದ್ಧಿ ಚಿಂತನೆ ಭಾರತದ ಸನಾತನ ಸಂಸ್ಕೃತಿಯಿಂದ ಆಚೆಗೆ ಬರುವುದಿಲ್ಲ. ಹಾಲಿ ಭಾರತದಲ್ಲಿರುವ ಧರ್ಮ, ಜಾತಿ ಪಂಥಗಳಿಗೆ ಸಂಬಂಧಿಸಿದ ಸಂಸ್ಕೃತಿಯಲ್ಲಿ ಇರುವ ಮೂಲ ತತ್ವಗಳೆ ನಮ್ಮ ಅಭಿವೃದ್ಧಿಗೆ ಮೂಲ ನೆಲೆಗಳು ಎಂದು ಇವರು ನಂಬಿಕೊಂಡಂತೆ ಇದೆ. ಈಗ ದೇಶಿ ಮತ್ತು ದೇಶೀಯತೆಯ ಬಗ್ಗೆ ಮಾತನಾಡುವ ಹಲವಾರು ದೇಶೀಯತೆಯ ಬೇರು ತಾವು ನೆಲೆ ನಿಂತಿರುವ ಧರ್ಮ ಜಾತಿ ಅಥವಾ ಪಂಗಡದೊಳಗೇ ಇದೆ ಎಂದು ತಿಳಿಸಿದಂತಿದೆ. ಆದ್ದರಿಂದ ಇವರು ಜಾಗತೀಕರಣಕ್ಕೆ ಪ್ರತಿರೋಧವಾಗಿ ದೇಶಿಯನ್ನು ಗುರಾಣಿಯಂತೆ ಬೆಳೆಸಿಕೊಳ್ಳಲು ಬಯಸಿದಂತಿದೆ. ಆದರೆ ಇವರು ಬಳಸಲೇಬೇಕಾದ ಕತ್ತಿಗಳು ಜಾಗತಿಕ ಪ್ರಭುಗಳ ಕೈಯಲ್ಲೇ ಇವೆ.[೧]

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೇಂದ್ರಬಿಂದುವಾದ ಶ್ರೀ ಮರುಕುಂಟ್ಲೇಶ್ವರ ದೈವವು ಸಾಮಾನ್ಯ ದೈವಕ್ಕಿಂತ ಭಿನ್ನ ಹಾಗೂ ವಿಶಿಷ್ಟ ಇದೊಂದು ಪಕ್ಕಾ ದೇಶಿಯ ಚಿಂತನೆಯ ನೆಲೆಯಾಗಿದೆ. ಬಹುಶಃ ಶಿಷ್ಟ ಸಂಸ್ಕೃತಿಯ ಪ್ರತೀಕವಾದ ಮೂರ್ತಿ, ವಾಸ್ತುಶಿಲ್ಪ ದೇವಸ್ಥಾನಗಳಿಂದ ಬಹುದೂರವಿರುವ ಈ ದೈವ ದ್ರಾವಿಡ ಅಧ್ಯಯನಕ್ಕೊಂದು ಸ್ಪಷ್ಟ ಉದಾಹರಣೆಯೆನಿಸಿದೆ. ದ್ರಾವಿಡರ ಟೋಟೆಮಿಸಂ

ಪರಿಕಲ್ಪನೆಯ ನೆಲೆಯಲ್ಲಿಯೇ ಇರುವ ಈ ದೈವ ಲಾಂಛನ ಸ್ವರೂಪವಾಗಿ ಮಾತ್ರ ಕಂಡುಬರುತ್ತಿದ್ದು, ಇತ್ತೀಚೆಗೆ ಶಿಷ್ಟತೆಯ ಪರಿಣಾಮವಾಗಿ ಮೂರ್ತಿತ್ವ ಪಡೆದುಕೊಂಡಿದೆ. ಹಾಗೆಯೇ ಬುಡಕಟ್ಟು, ದ್ರಾವಿಡ ಪರಿಕಲ್ಪನಾತ್ಮಕ ನೆಲೆಯಲ್ಲಿಯೇ ಪೂಜೆಗೊಂಡಿದೆ. ಈ ದೈವ ತುಂಬ ವಿಭಿನ್ನ ದೃಷ್ಟಿಕೋನಗಳನ್ನು ನಮ್ಮ ಮುಂದಿಟ್ಟಿದೆ. ದೈವಾರಾಧನೆ ಎಂದೊಡನೆಯೆ ಶಿಷ್ಟವರ್ಗದ ಪ್ರತಿನಿಧಿಕರಣವನ್ನು ಒಳಗೊಳ್ಳುವ ಭಾರತೀಯ ಸಂಸ್ಕೃತಿಯಲ್ಲಿ ಅಲ್ಲಲ್ಲಿ ಕಂಡುಬರುವ ಉದಾಹರಣೆಗಳು ಎಲ್ಲ ವರ್ಗಗಳನ್ನು ಒಳಗೊಳ್ಳುವ ಸಂದರ್ಭ ಇರಬಹುದಾದರೂ ಕೇವಲ ಬೆರಳೆಣಿಕೆಯಷ್ಟೆ ಆದರೆ ಈ ದೈವವನ್ನು ದಲಿತರೇ ಪೂಜಿಸುತ್ತಿದ್ದು ವಿಶೇಷವಾಗಿದೆ. ಹೀಗೆ ದಲಿತರೇ ಪೂಜಿಸುವಲ್ಲಿಯೂ ಒಂದು ಮಹತ್ವದ ಐತಿಹ್ಯವಿದೆ.

ಈ ದೈವವು ಮೊದಲು ನೆಲೆಗೊಂಡ ಸಂದರ್ಭದಲ್ಲಿ ದಲಿತರಿಗೆ ಒಲುಮೆಯಾಯಿತು. ದಲಿತ ಜನಾಂಗದಲ್ಲಿನ ವ್ಯತ್ಯಾಸ ಮಧ್ಯ ಹೆಣ್ಣಿನ ಸಹವಾಸ ಮಾಡಿರುವಂತಹ ಜನಾಂಗವಾಗಿರುವುದರಿಂದ ಉನ್ನತ ವರ್ಗದವರಿಗೆ ಈ ದೇವರ ಪೂಜೆಗೆ ನೇಮಿಸಿದರು. ಹಲವು ವರ್ಷಗಳ ಹಾಗೇಯೇ ನಡೆದುಕೊಂಡು ಬಂದಿತು. ನಂತರದ ದಿನಗಳಲ್ಲಿ ಉನ್ನತ (ಲಿಂಗಾಯ್ತರ) ಜನಾಂಗದಲ್ಲಿ ಮುಟ್ಟಿನ ದೋಷವೂ ಇನ್ನೂ ಯಾವುದೇ ರೀತಿಯ ದೋಷವು ಕಂಡುಬಂದದ್ದರಿಂದ ದೇವರಿಗೆ ಸರಿಕಾಣಲಿಲ್ಲ ಮತ್ತು ಮನೆಯಲ್ಲಿ ಹಲವು ತೊಂದರೆಗಳು ಕಂಡು ಬಂದವು. ಇದರಿಂದ ಅವರು ಪುನಃ ದೈವವನ್ನು ನಾಯಕ ಜನಾಂಗಕ್ಕೆ ವರ್ಗಾಯಿಸಿದರು. ಅಂದಿನಿಂದ ನಂಬಿಕೆ ಮತ್ತು ಪವಾಡಗಳು ಹೆಚ್ಚಿದವು. ಜನರಲ್ಲಿ ಭಕ್ತಿ ಹೆಚ್ಚಾಯಿಯಾಯಿತು. ಅಂದುಕೊಂಡ ಕೆಲಸಗಳು ಪವಾಡ ರೂಪದಲ್ಲಿ ಕಣ್ಣೆದುರಿಗೆ ಕಂಡವು. ಅಂದಿನಿಂದ ಇಂದಿನವರೆಗೆ ನಾಯಕ ಜನಾಂಗದವರು ದೇವರನ್ನು ಪೂಜೆಮಾಡುತ್ತಾರೆ. ಈ ದೇವರಿಗೆ ಚಾಮರ ಬೀಸುವುದು ಉನ್ನತ ಜಾತಿಯ ವರ್ಗದವರು ಆಡಳಿತ ಮತ್ತು ಆರ್ಥಿಕ ಹೊಣೆಯನ್ನು ಉನ್ನತ ಜಾತಿಯವರೇ ಮಾಡುತ್ತಾರೆ. ಅಲ್ಲದೆ ಬೇರೆಲ್ಲ ವರ್ಗಗಳು ಈ ಪೂಜೆಯಲ್ಲಿ ಜಂಗಮರು ಲಿಂಗಾಯ್ತರು, ನಾಯಕರು, ಮಾದಿಗರು, ಮಡಿವಾಳರು ಎಲ್ಲ ವರ್ಗದ ಜನರು ಪಾಲ್ಗೊಳ್ಳುವರು.

ಅಲ್ಲದೇ ಈ ದೈವವು ಅರ್ಚಕ ವರ್ಗದ ಶಿಷ್ಟತೆಯಿಂದ ದೂರವಿದ್ದಂತೆ ದೇವಸ್ಥಾನದ ಪರಿಕಲ್ಪನೆಯಿಂದಲೂ ತನ್ನತನ ಕಾಯ್ದುಕೊಂಡು ದೇಸೀತನವನ್ನು ಮೆರೆದಿದೆ. ಹಾಗಾಗಿಯೇ ದೇಸೀ, ದ್ರಾವಿಡ ಎನ್ನುವ ಪರಿಕಲ್ಪನೆಗಳಿಗೆ ಇದೊಂದು ಸ್ಪಷ್ಟ ನಿದರ್ಶನವಾಗಿದೆ. ಈ ಹಿನ್ನಲೆಯಲ್ಲಿ ಈ ದೈವದ ಭೌತಿಕ ಸ್ವರೂಪವನ್ನು ಇಲ್ಲಿ ಕೊಡಲಾಗಿದೆ.

ಇನ್ನು ಈ ದೈವದ ಅತೀ ವಿಶಿಷ್ಟ ಪವಾಡವೂ ಅಥವಾ ವಿಶೇಷತೆಯೋ ಎಂದರೆ ಯಾರ ಕಣ್ಣಿಗೂ ಕಾಣದಿರುವುದು, ಅಮೂರ್ತ ಕಲ್ಪನೆಯಾದ ದ್ರಾವಿಡ ದೈವವಾಗಿರುವ ಈ ದೇವರು ಲೌಕಿಕವಾಗಿ ಕೂಡ ಕ್ಯಾಮರಾಕಣ್ಣಿಗೆ ಕಾಣದಿರುವುದು ಒಂದು ವಿಸ್ಮಯದ ಸಂಗತಿ. ಮಾನವನ ದೃಗೋಚರ ಮಾತ್ರವೆನಿಸಿರುವ ಆದರೆ ಆಧುನಿಕತೆಗೆ ಸಿಲುಕದ ಮಾದರಿಯಾಗಿ ಇದು ಕಾಣಬರುತ್ತದೆ. ಪೂರ್ವಿಕರಿಂದಲೂ ಇದು ಕೇಳಿಬಂದ ವಿಷಯವಾದರೂ ನನ್ನ ಅನುಭವ ಕೂಡ ಇದಕ್ಕಿಂತ ಹೊರತಾಗಿಲ್ಲ ಈ ದೇವರನ್ನು ಕ್ಯಾಮರಾ

ಕಣ್ಣಿನಲ್ಲಿ ನೋಡಲು ಸಾಧ್ಯವಿಲ್ಲ, ಇದು ಇಂದಿನ ಹೈಟೆಕ್ ಯುಗದ ಸತ್ಯಸಂಗತಿಯೆನಿಸಿದೆ. ಈ ದೈವವು ಯಾವುದೇ ವೀಡಿಯೋ ಅಥವಾ ಛಾಯಾಚಿತ್ರಕ್ಕೆ ಇದುವರೆಗೆ ಎಲ್ಲಿಯೂ ಕಾಣಿಸಿಕೊಂಡಿಲ್ಲ. ಉದ್ದೇಶ ಪೂರ್ವಕವಾಗಿ ಛಾಯಾಚಿತ್ರವನ್ನು ತೆಗೆದರೂ ಸಹ ಕ್ಯಾಮರ ಅಥವಾ ವಿಡಿಯೋ ಪ್ಲಾಷ್ ಕೆಟ್ಟುಹೋಗುತ್ತದೆ. ಇದು ಇದರ ಮಹಿಮೆಯಾಗಿದೆ. ಮತ್ತು ನನ್ನ ಅನುಭವ ಕೂಡ ಇದಕ್ಕಿಂತ ಹೊರತಾಗಿಲ್ಲ.

### ೩.೧. ದೇಗುಲದ ಚಿತ್ರಣ

ಶ್ರೀ ಮರುಕುಂಟ್ಲೇಶ್ವರ ದೇವಾಲಯವು ಪೂರ್ವದಿಂದಲೂ ನಿರ್ದಿಷ್ಟವಾದ ದೇವಸ್ಥಾನ ಇಲ್ಲ. ಅದು ಗುಡಿಸಲಿನಿಂದ (ಬಿದುರು) ಮಾಡಿದ ಕೃತಕ ಗುಡಿಯಾಗಿದೆ. ಇತ್ತೀಚ್ಚಿನ ದಿನದಲ್ಲಿ ಅದು ನಿರ್ಮಾಣದ ಹಂತದಲ್ಲಿ ಇದೆ. ಈ ದೇವರು ಗುಡಿಸಲು ನಿರ್ಮಾಣ ಮಾಡಲು ಸಂಡೂರಿನ ಕುಮಾರಸ್ವಾಮಿ ಬೆಟ್ಟದಲ್ಲಿ ಬಿದುರು ತಂದು ಪೌಳಿಯನ್ನು ಮಾಡಲಾಗಿದೆ. ಅದಿನವು ಉಪವಾಸದಿಂದ ಭಕ್ತಾದಿಗಳು ಈ ಕೆಲಸವನ್ನು ಮಾಡುತ್ತಾರೆ. ಈ ಗುಡಿಸಲಿನ ಸುತ್ತಲೂ ಲಕ್ಕಲಿ ತಪ್ಪಲಿನಿಂದ ಗೋಡೆ (ನೆರಿಕೆ)ಯನ್ನು ಕಟ್ಟುತ್ತಾರೆ. ಗರ್ಭಗುಡಿ, ಚಿಕ್ಕದಾಗಿ ಕಾಮ್ಸಿ ಕಡ್ಡಿಯಿಂದ ನಿರ್ಮಾಣ ಮಾಡುತ್ತಾರೆ. ಅದರ ಸಭಾಮಂಟಪದ ಮೇಲೆ ಗೋಪುರವನ್ನು ಕಾಣಬಹುದಾಗಿದೆ. ಈಮೊದಲು ಗೋಪುರವನ್ನು ತಿಮ್ಮರೆಡ್ಡಿ ಎಂಬ ಲಿಂಗಾಯ್ತಿನು ಭಕ್ತಿಯಿಂದ ಪ್ರಾರಂಭಿಸುತ್ತಾನೆ. ನಂತರ ಎಲ್ಲಾ ನಾಯಕ ಜನಾಂಗದವರು ಮುಂದುವರಿಸುತ್ತಾರೆ. ಗರ್ಭಗುಡಿಯ ಮದ್ಯದಿಂದ ತುದಿಯವರೆಗೆ ಕಂಚಿನ ಗೋಪುರ ನೇತಾಕಿರುತ್ತಾರೆ. ಗರ್ಭಗೃಹದ ಒಳಗೆ ಶ್ರೀ ಮರುಕುಂಟ್ಲೇಶ್ವರ ದೇವರು ತೂಗುವ ತೊಟ್ಟಿಲಿನ ಮೇಲೆ ಇರುತ್ತಾನೆ. ಇದು ಬೆಳ್ಳಿಯ ಕೋಲುಗಳಿಂದ ನಿರ್ಮಿತಗೊಂಡಿದೆ. ಅದಕ್ಕೆ ಕಂಬಳಿಯ ಎಳೆಯನ್ನು ಸುತ್ತಿರುತ್ತಾರೆ. ಇಲ್ಲಿ ಕಂಬಗಳು ಇರುವುದಿಲ್ಲ. ಈ ಗುಡಿಸಲ ದುಂಡಾಕಾರವಾಗಿ ಅಲಂಕಾರವಾಗಿ ನಿರ್ಮಿಸುತ್ತಾರೆ. ಇದು ದ್ರಾವಿಡರ ಅಥವಾ ಸಿಂಧೂಬಯಲಿನ ನಾಗರಿಕತೆಯ ವಸತಿ ಗೃಹಗಳ ಹೋಲಿಕೆಯನ್ನು ಹೋಲುತ್ತದೆ. ಈ ದೇವರ ಪಕ್ಕದಲ್ಲಿ ಎಡಗಡೆ ಗಾದ್ರಿ ಪಾಲನಾಯ್ಕ ದೇವರು ಮತ್ತು ಬಲಗಡೆ ಬೋಸೆದೇವರುಗಳನ್ನು ಇರಿಸುತ್ತಾರೆ. ಈ ದೇವರುಗಳಿಗೂ ಪ್ರತ್ಯೇಕವಾದ ಗುಡಿಸಲುಗಳನ್ನು ಹಾಕಿರುತ್ತಾರೆ. ಶ್ರೀ ಮರುಕುಂಟ್ಲೇಶ್ವರ ದೇವರ ದೇವಸ್ಥಾನವು ಇನ್ನೂ ನಿರ್ಮಾಣದ ಹಂತದಲ್ಲಿ ಇದೆ. ೨೦೦೯ರಲ್ಲಿದಾನಿಗಳು ಹಾಗೂ ಸರ್ಕಾರದ ವತಿಯಿಂದ ನಿರ್ಮಾಣ ಪ್ರಾರಂಭಗೊಂಡರೂ ಇನ್ನೂ ಆರಂಭದಲ್ಲಿ ಇದೆ. ಆದರೆ ಇನ್ನೂ ಪೂರ್ಣವಾಗಿ ಮುಗಿದಿಲ್ಲ. ಈ ದೇವರು ಊರು ಬಿಟ್ಟು ಹೊರಗಡೆ ವಿಶಾಲವಾದ ಜಾಗದಲ್ಲಿ ಸೂರ್ಯನಿಗೆ ಎದುರಾಗಿ ಮುಖ ಮಾಡಿ ಭವ್ಯವಾಗಿ ತಲೆ ಎತ್ತಿ ನಿಂತಿರುತ್ತದೆ. ಇದು ಬಹಳ ಆಕರ್ಷಣೀಯವೆನಿಸಿದೆ.

ಶ್ರೀ ಮರುಕುಂಟ್ಲೇಶ್ವರ ದೈವವು ಮೂಲತಃ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಮರುಕುಂಟೆ ಗ್ರಾಮದಿಂದ ಬಂದಿದ್ದು, ಕಥೆಯ ಪ್ರಕಾರ ದಿಬ್ಬದಹಳ್ಳಿ, ತಿಮ್ಮನಹಳ್ಳಿ, ಮತ್ತು ಎಕ್ಕೆ ಗೊಂದಿ ಜನರು ಆಗಿನ ಕಾಲದಲ್ಲಿ ದುಡಿಯಲು ಹೋದಾಗ ಅವರ ಭಕ್ತಿಗೆ ಮೆಚ್ಚಿ ದಿಬ್ಬದಹಳ್ಳಿಗೆ ಬಂದುದು. ಅಂದರೆ ಮಾದಿಗರ ಪಾಲಯ್ಯ ನಾಯಕರ ಪಾಪಯ್ಯ ಕೆಂಗ್ಲುಕಪ್ಲೆ ತಿಮ್ಮರಾಜ ಈ ಮೂವರು ಬೇರೆ

ಬೇರೆ ಜಾತಿಯವರು. ಈ ಮೂವರ ಶ್ರೇಣಿಗತವಾಗಿ ಆಯಾ ಕೆಲಸಕ್ಕೆ ತೊಡಗಿದರು. ಮರುಕುಂಟೆಯಿಂದ ನೇರವಾಗಿ ನಾಯಕನಹಟ್ಟಿಗೆ ಬಂದು ಅಲ್ಲಿ ಸ್ವಲ್ಪಸಮಯದ ನಂತರ ಸಂಗೀತದ ವಾದ್ಯಗಳ ಮೂಲಕ ತಾಯಕನಹಳ್ಳಿಯಿಂದ ನೇರವಾಗಿ ಶಿವಗಂಗೆಗೆ ಬಂದು ನಂತರ ಎಕ್ಕೆಗೊಂದಿಗೆ ಬಂದರು. ಈ ಊರಿನಲ್ಲಿ ದೇವರಿಗೆ ಸಮಾಧಾನ ಇಲ್ಲದ ಕಾರಣ ಮುಂದೆ ಭಕ್ತರು ಕ್ರಮಬದ್ಧತೆಯ ಪೂಜೆ ಪುನಸ್ಕಾರಗಳು ದಿಬ್ಬಹಳ್ಳಿಯಲ್ಲಿ ಕಂಡು ಬಂದವು. ಆದ್ದರಿಂದ ಈ ದೈವವು ದಿಬ್ಬದಹಳ್ಳಿಯಲ್ಲಿ ನೆಲೆಯೂರಿತು. ಪೂರ್ವಕಾಲದಲ್ಲಿ ಜನರು ಬೆದರಿಸಿ ಅವರಲ್ಲಿದ್ದ ಸರಕು ವಸ್ತು ಮತ್ತು ದನಗಳನ್ನು ಕಬಳಿಸಲು ಬಂದಾಗ ಈ ದೈವವು ಅವರನ್ನು ಹಿಮ್ಮೆಟ್ಟಿಸಿ ತನ್ನ ಭಕ್ತರನ್ನು ಊರಿನವರಿಗೂ ಬಂದು ತಲುಪಿಸಿದನು. ಇದರಿಂದ ಆ ಭಕ್ತರು ಸ್ವಾಮಿ ನೀನು ಇಲ್ಲೇ ನಮ್ಮ ಗ್ರಾಮಗಳಲ್ಲೇ ವಾಸವಾಗಬೇಕೆಂದು ಬೇಡಿಕೊಂಡಾಗ ಇವರ ಭಕ್ತಿಗೆ ಮೆಚ್ಚಿ ಅವರ ಆಪತ್ತುಗಳನ್ನು ಗಮನಿಸಿದ. ದೇವರು ಅಂದಿನಿಂದ ಅಲ್ಲಿ ಒಂದು ಚಿಕ್ಕ ಗುಡಿಸಲಿನಲ್ಲಿ ವಾಸವಾದನು. ಕಾಲಾಂತರದಲ್ಲಿ ಆ ಗುಡಿಸಲು ಅವನತಿ ಸ್ಥಿತಿಗೆ ಬಂದಾಗ ಅದನ್ನು ಕಿತ್ತಿ ಈಗ ನಿರ್ಮಿಸಲಾಗಿದೆ. ಹಂತದಲ್ಲಿ ಗುಡಿ (ದೇವಸ್ಥಾನ) ಇದೆ. ಇದು ಜಾತ್ರೆಯ ಸಮಯದಲ್ಲಿ ಪೌಳಿಯನ್ನು ಈಗಲೂ ಬಳಸುತ್ತಾರ. ದೇವರು ಗುಡಿಸಲು ವಾಸ್ತವಾಗಿ ಗೋಪುರಾಕಾರದಲ್ಲಿ ಕಂಡುಬಂದಿದೆ. ಇಲ್ಲಿ ಯಾವುದೇ ಬಣ್ಣಗಳಿಂದ ಅಲಂಕಾರಿಸಲಾಗುವುದಿಲ್ಲ. ಇದು ಬರೀ ಬಿದಿರು ಮತ್ತು ಕಾಮ್ಸಿಕಡ್ಡಿಯಿಂದ ಪೌಳಿ ನಿರ್ಮಾಣವಾಗಿದೆ.

ಭಕ್ತರು ಹರಕೆ ಹೊತ್ತು ಮೀಸಲು ಧಾನ್ಯ ಮತ್ತು ಹಣ ಇನ್ನು ಯಾವುದೇ ವಸ್ತುಗಳ ಸಂಗ್ರಹಕ್ಕೆ ದಾಸೋಹ ಕಾರ್ಯಕ್ಕೆ ಸಹಾಯಕವಾಗಿದೆ. ಜಾತ್ರೆಯು ಪ್ರಾರಂಭವಾಗುವುದಕ್ಕಿಂತ ಒಂದು ವಾರ ಮೊದಲು ದೇವರ ಜಗುಲಿ ಸಂಪೂರ್ಣವಾಗಿ ಶೃಂಗಾರ ಮಾಡುತ್ತಾರೆ. ಈ ಕಾರ್ಯ ಜಾತಿ ವೈಷಮ್ಯಗಳಿಲ್ಲದೆ ಪ್ರೀತಿಯಿಂದ ಭಕ್ತಿ ಪೂರ್ವಕವಾಗಿ ನಡೆಯುತ್ತದೆ.

### ಶಿಲ್ಪ

ಮರುಕುಂಟ್ಲೇಶ್ವರ ದೇವರ ಶಿಲ್ಪ ಕಾಲದಿಂದ ಹಳೆಯದಾಗಿದೆ. ಅದು ಮೊದಲು ಬೆತ್ತದಿಂದ ಕೂಡಿತ್ತು. ನಂತರ ಅದನ್ನು ಮೂರ್ತಿ ರೂಪದಲ್ಲಿ ಮಾಡಲಾಗಿದೆ. ಇದು ಗಂಡುವೇಷವನ್ನು ಹೋಲುವಂತಾದ್ದಾಗಿದೆ. ಆದರೆ ಕೆಲವು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಈ ದೈವವು ಸಂಪೂರ್ಣಬೆಳ್ಳಿಯ ಕೋಲುಗಳಿಂದ ತುಂಬಿದೆ ಮುಂದೆ ಬಗಲವಾದ ಮುಖ ಅದರ ಮೈಯ ಮೇಲೆ ಬೆಳ್ಳಿಯ ತೊಟ್ಟಿಲು ಮತ್ತು ಲಿಂಗಗಳು ಹಾಗೂ ನಾಗರ ಹೆಡೆಯನ್ನು ಎತ್ತಿಹಾಡುವ ಹಾವಿನ ಮೂರ್ತಿಯೂ ಇದೆ. ಪಕ್ಕದಲ್ಲಿ ಸಹವರ್ತಿಗಳಾದ ಗಾದ್ರಿಪಾಲನಾಯ್ಕ ಮತ್ತು ಬೋಸೆದೇವರುಗಳು ಕಂಡು ಬರುತ್ತವೆ. ಇವು ಸಹ ಬೆಳ್ಳಿಯ ಕೋಲುಗಳಿಂದ ಮಾಡಲ್ಪಟ್ಟಿದು ಅದಕ್ಕೆ ಕಂಬಳಿಯ ಎಳೆ ಹೊದಿಕೆಯಾಗಿ ಬಳಸಿದ್ದಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈತ ಒಬ್ಬ ಸಾಂಸ್ಕೃತಿಕ ನಾಯಕನಾಗಿದ್ದನೆಂದು ತಿಳಿದುಬರುತ್ತದೆ. ಈತನ ಪುರಾಣಕಥೆಯನ್ನು ಅವಲೋಕಿಸಿದಾಗ ಮರುಕುಂಟ್ಲೇಶ್ವರ ದೇವರು ದನಗಳನ್ನು ಅವಲಂಬಿಸಿದ್ದಾನೆ.

ಅವರಿಗೆ ಎತ್ತಿನ ಕಿಲಾರಿ ಎಂದು ಕರೆಯುತ್ತಾರೆ. ಆ ದನಗಳಲ್ಲಿ ವಿಶೇಷವಾದ ಬಸವ (ಗೂಳಿ) ಬಲಿಷ್ಟವಾಗಿರುತ್ತದೆ. ಈ ದನಗಳನ್ನು ಈವತ್ತಿನವರೆಗೆ ಯಾರು ಉದ್ದೇಶ ಪೂರ್ವಕವಾಗಿ ಕಾಯುವುದಿಲ್ಲ. ಅವು ತನ್ನಷ್ಟಕ್ಕೆ ತಾನೇ ಹಟ್ಟಿಯಿಂದ ಹೋಗಿ ಪುನಃ ಸಂಜೆಗೆ ಹಟ್ಟಿಗೆ ಬರುತ್ತವೆ. ಈ ದನಗಳನ್ನು ಅಪಹರಿಸಿದವರಿಗೆ ರಾತ್ರಿಯೆಲ್ಲ ಕಣ್ಣು ಕಾಣದೇ ಅಲ್ಲೇ ನಿಂತಿರುತ್ತಾರೆ. ಮುಂಜಾನೆ ನೋಡಿ ಅವರಿಗೆ ಶಿಕ್ಷೆ ಅಥವಾ ದೇವರಲ್ಲಿ ಹರಕೆಯನ್ನು ಒಪ್ಪಿಸುತ್ತಾರೆ.

**೩.೨. ಉಡುಗೆ-ತೊಡುಗೆ**

ಈ ದೇವರಿಗೆ ಉಡುಗೆ ತೊಡುಗೆಗಳು ಎಂದರೆ ದೇವರು ಸಂಪೂರ್ಣವಾಗಿ ಬೆಳ್ಳಿಯ ಕೋಲುಗಳಿಂದ ಕೂಡಿದ್ದು ಅದಕ್ಕೆ ಮೇಲಿನ ಹೊದಿಕೆಯಾಗಿ ಕಂಬಳಿಯ ಎಳೆಯನ್ನು ಸುತ್ತುವರೆಯುತ್ತಾರೆ. ಮತ್ತು ಅದರ ಮೇಲೆ ಬೆಳ್ಳಿಯ ತೊಟ್ಟಿಲು ನಾಗರ ಹೆಡೆಗಳು ಹಾಗೂ ಲಿಂಗದ ಕಾಯಿಗಳು ಕಂಡುಬಂದಿವೆ. ಮುಖ್ಯವಾಗಿ ಪೂಜಾರಿಯು ಸಲ್ಲಾಣ ಧರಿಸಿ ತಲೆಯ ಮೇಲೆ ಪೇಟ ಧರಿಸಿರುತ್ತಾನೆ. ಇಲ್ಲಿ ಪೇಟದ ಮೇಲೆ ಹೊಂಬಾಳೆ ಮತ್ತು ಕ್ಯಾದಿಗೆ ಗರಿಯನ್ನು ಧರಿಸುತ್ತಾನೆ. ಹೆಗಲ ಮೇಲೆ ಕರಿ ಕಂಬಳಿ ಕೈಯಲ್ಲೊಂದು ಬೆತ್ತದ (ಕೋಲು) ಹಿಡಿದಿಟ್ಟಿರುತ್ತಾನೆ. ಈ ಪೇಟ ಮತ್ತು ಸಲ್ಲಾಣವು ಬಾದಾಮಿ ಬಣ್ಣ ಅಥವಾ ಶ್ವೇತ ಬಣ್ಣದಾಗಿರುತ್ತದೆ. ಅದು ಜರತಾರಿ ಪೇಟ ಆಗಿರುತ್ತದೆ. ಹಾಗೆಯೇ ಮರುಕುಂಟ್ಲೇಶ್ವರ ದೇವರ ಮೂರ್ತಿಯ ಮುಂದುಗಡೆ ಕೊಡೆ ಇರುತ್ತದೆ. ಕಾಲಂಚಿನಲ್ಲಿ ಕೆಂಪು ವಸ್ತ್ರ ಅಥವಾ ಬಿಳಿವಸ್ತ್ರದ ಸುತ್ತಲೂ ಬೆಳ್ಳಿಯ ಪಟ್ಟಿಯನ್ನು ಹೊಂದಿದ್ದು ಶಿವನ ಲಿಂಗವು ಮೂರ್ತಿಯ ಕೆಳಭಾಗದಲ್ಲಿ ತೂಗುವ ತೊಟ್ಟಿಲಲ್ಲಿ ಕಂಡುಬಂದಿದೆ. ಅಗ್ನಿ ಕುಂಡದ ಸಮಯದಲ್ಲಿ ಬರೇ ಬೆಳ್ಳಿಯ ಕೋಲುಗಳಲ್ಲಿ ಹತ್ತಾರೂ ಜನರ ಅಂತ್ರದಿಂದ ಹಗ್ಗದ ಸಹಾಯದಿಂದ ದೇವರು ಅಗ್ನಿಕುಂಡ ಪ್ರವೇಶ ಮಾಡುತ್ತಾನೆ ಭಕ್ತರು ಹಗ್ಗದಿಂದ ಜಗ್ಗಿ ಹಿಡಿಯುತ್ತಾರೆ. ಅಗ್ನಿಕುಂಡದ ಪೂಜಾರಿ ವೃಂದದವರು ಬರೀ ಒಂದೇ ಬಟ್ಟೆಯ ಮಾತ್ರ ಸುತ್ತಿಕೊಳ್ಳುತ್ತಾರೆ. ಶ್ರೀ ಮರುಕುಂಟ್ಲೇಶ್ವರ ದೇವರಿಗೂ ಪೂರ್ವಕಾಲದಿಂದಲೂ ಭಕ್ತಿಯಿಂದ ಕೆಲವುವಂಶಸ್ತರು ಹೆಣ್ಣುಮಕ್ಕಳು ರವಿಕೆ (ಕುಬುಸ) ತೊಡುವುದಿಲ್ಲ. ಮತ್ತು ಕರೆಬಟ್ಟೆಯನ್ನು ಉಪಯೋಗಿಸುವುದಿಲ್ಲ ದೇವರ ಆಭರಣಗಳಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಮತ್ತು ಲೋಹಗ ಬಳಿಕೆ ಕಂಡುಬಂದಿದೆ. ಈ ತರಹದ ಆಭರಣಗಳನ್ನು ಭಕ್ತಾದಿಗಳು ಹಚ್ಚಿನ ರೀತಿಯಲ್ಲಿ ದಾನ ಮಾಡುತ್ತಿದ್ದಾರೆ. ಹಾಗೂ ಪಕ್ಕದಲ್ಲಿ ಗಾದ್ರಿಪಾಲಯ್ಯ ಮತ್ತು ಬೋಸೆದೇವರ ಮೂರ್ತಿಗಳ ಸಹ ಬೆಳ್ಳಿಗಳಿಂದ ಮಾಡಿರುವಂತದಾಗಿವೆ. ದೇವರ ದೀಪ ಸ್ತಂಭಗಳು ತಾಮ್ರದಿಂದ ಮಾಡಿಸಿದ್ದಾರೆ. ಇವು ಸುಮಾರು ೨ ಅಡಿ ಎತ್ತರದಲ್ಲಿ ಇವೆ. ಮತ್ತು ಪೂಜಾ ಸಾಮಾಗ್ರಿಗಳಾದ ಗಂಟೆ, ಆರತಿ ತಟ್ಟೆ, ಲೋಬಾನ, ಉಡುಗೆ ತೋಡುಗೆಗಳನ್ನು ಹಾಕಿದ್ದಾರೆ.

**೩.೩. ನೆಲೆಗೊಂಡಿರುವ ಐತಿಹ್ಯ**

ಐತಿಹ್ಯ ಪದವು ಇಂಗ್ಲೀಷ್‌ನ Legend ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗಿದೆ. ಲಿಜೆಂಡ್ ಮೂಲತ ಲ್ಯಾಟಿನ್ ಪದವಾಗಿದೆ. ಅಲ್ಲಿ ಅದಕ್ಕೆ Things to be reod ಎಂಬ ಅರ್ಥವಿದೆ. ಫ್ರೆಂಚ್

ಭಾಷೆಯಲ್ಲಿ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ. ಇವು ಪ್ರಾರ್ಥನಾ ಮಂದಿರಗಳಲ್ಲಿ ಪುರಾಣ ಮಾಡುಬಹುದಾದ. ವಿಷಯಗಳಾಗಿದ್ದವು. ಚಾರಿತ್ರಿಕವಾಗಿ ಈ ಲೆಜೆಂಡ್ ಪದದ ಅರ್ಥ ಒಂದೇ ರೀತಿಯಾಗಿ ಉಳಿದಿಲ್ಲ ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನ ಬೆಳೆದು ಬಂದಂತೆ ಅದರ ಅರ್ಥದಲ್ಲಿ ವ್ಯಾತ್ಯಾಸವಾಗತೊಡಗಿತು. ೧೯-೨೦ನೇ ಶತಮಾನದ ಹೊತ್ತಿಗೆ ಲೆಜೆಂಡ್ ಪದವು, ಪರಂಪರೆಯಿಂದ ಬಂದಿದ್ದು, ಎಂಬ ವಿಶಾಲರ್ಥದಲ್ಲಿ ಬಳಕೆಯಾಗತೊಡಗಿದ್ದು, ಕಿವಿಯಿಂದ ಕಿವಿಗೆ ಹರಿದು ಬಂದಿರುವ ಮತ್ತೊಂದು ಜನಪ್ರಿಯವೂ ನಂಬುವಂತಲೂ ಇದ್ದಾಗ ಅದನ್ನು ಜನರು ಐತಿಹ್ಯವೆಂದು ಕರೆಯುತ್ತಿದ್ದರು. ಸತ್ಯದ ಶೋಧಕ್ಕೆಇದು ಒಂದು ಪ್ರಮಾಣವಾಗಿದೆ. ಐತಿಹ್ಯ ಸಂಭಾವ್ಯ ಅಂಶಗಳು ಮೇಲಿಂದ ಮೇಲೆ ಸೇರುತ್ತಿದ್ದರೂ ಮೂಲ ಸತ್ಯಪೂರ್ತಿ ನಾಶವಾಗುವುದಿಲ್ಲ ಆಧಾರಕ್ಕೆ ನಿರೂಪಣೆಗೂ ವೈಜ್ಞಾನಿಕತೆಗೂ ಮತ್ತು ಮನೋವಿಜ್ಞಾನಕ್ಕೂ ಸಂಬಂಧ ಇರುವುದಿಲ್ಲ[೨] ಸುಸಂಬದ್ಧ ತರ್ಕ ಮಾತ್ರ ಇರುತ್ತದೆ. ಹಾಗಾಗಿ ಎಷ್ಟು ವೈಜ್ಞಾನಿಕ ಯುಗದಲ್ಲಿದ್ದರೂ ವೈಚಾರಿಕ ಕ್ರಾಂತಿ ನಡೆದರೂ ಮನುಷ್ಯನ ದೈವ ಚಿಂತನೆಯ ನೆಲೆಯನ್ನು ಸ್ಪಷ್ಟಪಡಿಸುವುದು ಕಷ್ಟ ಸಾಧ್ಯ. ಈ ಹಿನ್ನೆಲೆಯಲ್ಲಿ ಇನ್ನು ಮನೋವೈಜ್ಞಾನಿಕ ನೆಲೆಯಿಂದ ಪರಿಗಣಿಸಬಹುದು.

ಇದೇ ರೀತಿ ಪೂರ್ವ ಕಾಲದಿಂದಲೂ ದಿಬ್ಬದಹಳ್ಳಿಯ ಮರುಕುಂಟ್ಲೇಶ್ವರ ದೈವವು ನೆಲೆಗೊಳ್ಳಲು ಊರಿನ ಹಿರಿಯರು ಹಾಗೂ ಕಿಲಾರಿ ಮನೆತನದವರು ಪೂರ್ವಿಕರಿಂದ ಕೇಳಿಬಂದ ಐತಿಹ್ಯ ಹೀಗಿದೆ. ಈ ಗ್ರಾಮಗಳಲ್ಲಿ ಸಮೃದ್ಧ ಪರಿಸರ ಮಳೆ ಬೆಳೆ, ಹಳ್ಳಕೊಳ್ಳಗಳ ಚನ್ನಾಗಿ ಹರಿಯುವುದರಿಂದ ಮರುಕುಂಟ್ಲೇಶ್ವರ ದೇವರು ನೆಲೆಗೊಂಡಿತು. ಹಿಂದೆ ಹೇಳಿದ ಈ ಮೂವರ ಭಕ್ತಿ, ಶ್ರದ್ಧೆ, ಆಚಾರ, ವಿಚಾರಗಳಿಂದ ದೇವರ ಒಲುಮೆಯಾಯಿತು. ಮರುಕುಂಟೆಯಿಂದ ನಾಯಕನಹಟ್ಟಿಯ ಮಾರ್ಗದಿಂದ ನೇರವಾಗಿ ಶಿವಗಂಗೆಗೆ ಬಂದು ನೆಲೆಗೊಂಡಿತು. ವಿಶಾಲವಾದ ಮೈದಾನ ಆಗಿನ ಕಾಲದಲ್ಲಿ ಹಳ್ಳದಲ್ಲಿ ನೀರು ತುಂಬಿತುಳುಕುತ್ತಿತ್ತು. ದನಗಳಿಗೆ ಯೋಗ್ಯವಾದ ಮೇವು ಸಿಗುತ್ತಿತ್ತು. ದನಗಳ ಸೇವೆಯನ್ನು ಪಾಪಯ್ಯನು ಮಾಡಿದನು

ಶ್ರೀಮರುಕುಂಟ್ಲೇಶ್ವರ ದೈವವು ಅನೇಕ ರೀತಿಯ ಪವಾಡದಿಂದ ಕೂಡಿರುವುದರಿಂದ ಅದರ ಆಡಳಿತ ಮತ್ತು ಆಸ್ತಿಯ ಹಕ್ಕುಗಳನ್ನು ಊರಿನ ಗೌಡ ಮತ್ತು ಶಾನುಭೋಗ ಇದ್ದರೂ ಬೇರೆ ಜನಕ್ಕೆಕೊಟ್ಟರು. ದೇವರ ಭೂಮಿಯು ಸ್ವಂತ ಇರುವುದಿಲ್ಲ. ದೇವರ ಕಾರ್ಯಕ್ರಮಗಳು ಯಾವ ಸಮಯಕ್ಕೂ ನಿಲ್ಲಬಾರದೆಂಬ ಉದ್ದೇಶದಿಂದ ಕೆಲವು ಶ್ರೀಮಂತರು ದೇಣಿಗೆ ಎತ್ತಿ ಹಣದ ರೂಪದಲ್ಲಿ ಅಥವಾ ಧಾನ್ಯದ ರೂಪದಲ್ಲಿ ಸಂಗ್ರಹಿಸುತ್ತಿದ್ದರು. ಜನರು ದೇವರ ಕಾರ್ಯಕ್ರಮಗಳನ್ನು ನಡೆಸುವುದು. ಕಷ್ಟಕರವಾಗಿತ್ತು, ದಿಬ್ಬದಹಳ್ಳಿ ಮರುಕುಂಟ್ಲೇಶ್ವರ ದೇವರಿಗೆ ಜನರ ಮೇಲೆ ಅಪಾರವಾದ ಕರುಣೆಯು ಸಹ ಇತ್ತು.

## ೩.೪. ಆಡಳಿತ ಮತ್ತು ಆರ್ಥಿಕ ಸ್ಥಿತಿಗತಿ

ದೇವರ ಎಲ್ಲಾ ಆಡಳಿತದ ವ್ಯಾವಹಾರವನ್ನು ಕೆಂಗ್ಲುಕಪ್ಲೇ ತಿಮ್ಮರೆಡ್ಡಿರವರು ನೋಡಿಕೊಳ್ಳುತ್ತಿದ್ದರು. ಏಕೆಂದರೆ ದೇವರಿಗೆ ಮೊದಲ ಪೂಜೆಯೇ ಅವರದು. ದೇವರ ಮುಂದೆ ಚಾಮರ (ಚೌರಿ) ಬೀಸುವ ಕಾರ್ಯವು ಅವರ ವಂಶದಿಂದಲೂ ಬಂದ ಕೆಲಸವಾಗಿದೆ. ದೈವವು ಊರಿನ ಭಕ್ತಾಧಿಗಳು ಸೇರಿ ತೀರ್ಮಾನ ತೆಗೆದುಕೊಂಡು ಜನರ ಇಚ್ಛೆಯಂತೆ ದೇಣಿಗೆ ವಸ್ತುವಿನ ರೂಪದಲ್ಲಿ ದಾನ್ಯದ ರೂಪದಲ್ಲಿ ಹಾಕುತ್ತಿದ್ದರು. ಮತ್ತು ದೇವರ ಬಿಡಿಭಾಗಗಳಾದ ನಾಗರ ಹೆಡೆ ಲಿಂಗದಕಾಯಿ, ಬೆಳ್ಳಿಯ ತೊಟ್ಟಿಲು ಬೆಳ್ಳಿಯ ಕೋಲು ಈ ರೀತಿಯಾಗಿ ಜನರು ದೇವರಿಗೆ ಕಾಣಿಕೆಯನ್ನು ಕೊಟ್ಟರು. ಪ್ರತಿಯೊಂದು ಮನೆಗೆ ಇಷ್ಟು ಹಣ ನಿಗದಿಪಡಿಸಿ ಸಂಗ್ರಹಿಸಿ ದೇವರ ಉತ್ಸವವನ್ನು ಮಾಡುತ್ತಿದ್ದರು. ಆದರೆ ಯಾರು ಆ ದೇವರಿಗೆ ಎದುರಾಗುತ್ತಿರಲಿಲ್ಲ. ಪೂಜೆ ಸಾಮಾನುಗಳನ್ನು ಊರಿನ ಹೆಣ್ಣು ಮಕ್ಕಳು ಗೌರಿಹಬ್ಬದ ಸಂದರ್ಭದಲ್ಲಿ ಜನರಿಂದ ಪ್ರಯಾಣಿಕರಿಂದ ಬಂದಂತಹ ಹಣದಿಂದ ದೇವರಿಗೆ ಮುಡುಪಿನ ರೂಪದಲ್ಲಿ ಹಾಕುತ್ತಿದ್ದರು.

ಒಟ್ಟಾರೆಯಾಗಿ ಹೇಳುವುದಾದರೆ ಶ್ರೀ ಮರುಕುಂಟ್ಲೇಶ್ವರ ದೇವರು ಆಡಳಿತ ಹೊಣೆಗಾರಿಕೆಯನ್ನು ಕೆಂಗ್ಲುಕಪ್ಲೆ ತಿಮ್ಮರೆಡ್ಡಿಯರು ವಹಿಸಿಕೊಂಡರು. ಮತ್ತೆ ಸುತ್ತೂರಿನ ಜನರು ಭಕ್ತಿ ಪೂರ್ವಕವಾಗಿ ದೇಣಿಗೆಯನ್ನು ಕೊಡುತ್ತಿದ್ದರು.

ದೇವರ ದನಗಳ ಹೊಣೆಗಾರಿಕೆಯನ್ನು ಎತ್ತಿನ ಕಿಲಾರಿ ಪಾಪಣ್ಣನವರು ವಹಿಸುತ್ತಾರೆ. ಅದರ ಹೈನು ಅವರ ಒಡೆತನದಲ್ಲಿ ಇರುತ್ತದೆ. ಪ್ರತಿಯೊಂದು ಸಂಬಂಧಪಟ್ಟ ಕೆಲಸವನ್ನು ಕಿಲಾರಿ ಪಾಪಣ್ಣ ಮತ್ತು ದೇವರ ಕೆಲಸಗಳು ತಿಮ್ಮನಹಳ್ಳಿ ಮಾದಿಗ ಜನಾಂಗದವರು ಆಡಳಿತ ವಹಿಸಿಕೊಂಡಿರುತ್ತಾರೆ. ಇವರೆಲ್ಲರೂ ಒಬ್ಬೊಬ್ಬರು ಸೇರಿ ಕ್ರಮಬದ್ಧವಾಗಿ ಧರ್ಮಕಾರ್ಯಾರ್ಥವಾಗಿ ಸಂಪ್ರದಾಯಿಕ ಆಚರಣೆಗಳನ್ನು ಮಾಡುತ್ತಾರೆ. ಊರಿನ ನಾಯಕರು ಪ್ರಮುಖ ಮುಖಂಡರೆಲ್ಲರೂ ಸೇರಿ ಶ್ರೀಮರುಕುಂಟ್ಲೇಶ್ವರ ದೇವರ ಸೇವಾ ಕಾರ್ಯಕ್ರಮಗಳನ್ನು ಪ್ರತಿವರ್ಷ ನಡೆಸುತ್ತಾ ಬಂದಿದ್ದಾರೆ.

### ಆರ್ಥಿಕ ಸ್ಥಿತಿಗತಿ

ಈ ದೇವರ ಆರ್ಥಿಕ ಸ್ಥಿತಿಗತಿಯನ್ನು ನೋಡುವುದಾದರೆ ಒಂದು ಜಾತ್ರೆ ಯಾವ ರೀತಿಯಾಗಿ ನಡೆಯುತ್ತದೆಯೇ ಹಾಗೂ ಆ ದೇವಸ್ಥಾನ ಹೊಂದಿದ ಆಸ್ತಿಯ ಆಧಾರದ ಮೇಲೆ ಆರ್ಥಿಕ ಸ್ಥಿತಿಯನ್ನು ನಾವು ಕಾಣಬಹುದಾಗಿದೆ. ಈ ದೇವಸ್ಥಾನವು ಬಹಳಷ್ಟು ಆಸ್ತಿಯನ್ನು ಹೊಂದಿಲ್ಲ. ದೇವಾಲಯ ದೊಡ್ಡದಾಗಿದ್ದು ಭಕ್ತರು ಸಂಖ್ಯೆ ಭಾರಿ ಪ್ರಮಾಣದಲ್ಲಿ ಬರುತ್ತಿದ್ದಾರೆ. ಆ ದೇವರ ಆರ್ಥಿಕ ಸ್ಥಿತಿ ಭಕ್ತಾದಿಗಳಿಂದ ಚೆನ್ನಾಗಿದೆ ಎಂದು ತಿಳಿದು ಬರುತ್ತದೆ. ಆದರೆ ಮರುಕುಂಟೇಶ್ವರ ದೇವರಿಗೆ ಆಸ್ತಿಪಾಸ್ತಿಗಳು ಇಲ್ಲವಾದ್ದರಿಂದ ಹಾಗೂ ಸಾಮಾನ್ಯವಾಗಿಭಕ್ತರು ಬಂದು ಹೋಗದವರಿಂದ ಆರ್ಥಿಕವಾಗಿ ಅಷ್ಟೊಂದು ಅಭಿವೃದ್ಧಿ ಹೊಂದಿಲ್ಲವಾದರೂ ಆ ಗ್ರಾಮದ ಹಾಗೂ ಸುತ್ತಮುತ್ತಲಿನ ಗ್ರಾಮದ ಭಕ್ತರು ದೇವಸ್ಥಾನಕ್ಕೆ ನೀಡುವ ಹರಕೆಗಳನ್ನು ತೀರಿಸಲು ಧವಸದಾನ್ಯಗಳು ಹಾಗೂ ಬಂಗಾರ, ಬೆಳ್ಳಿ, ಹಣ, ಶೇಖರಿಸಿಕೊಂಡು ಈ ದೇವಸ್ಥಾನದ ಕಾರ್ಯಕ್ರಮಗಳನ್ನು ಮಾಡುತ್ತಾರೆ. ಭಕ್ತರಿಂದ ಬರುವ ಕಾಣಿಕೆಗಳೇ

ಈ ದೇವರ ಆದಾಯ ಎನ್ನಬಹುದು. ರಾಜಕೀಯವಾಗಿ ಈ ದೇವರಿಗೆ ಸ್ವಲ್ಪ ಆದಾಯವಿರಬಹುದು. ಆದರೆ ಚುನಾವಣೆಯ ಸಂದರ್ಭದಲ್ಲಿ ವಿವಿಧ ಪಕ್ಷದ ಮುಖಂಡರು ದೇವರಿಗೆ ನೀಡುವ ಹಣವನ್ನು ಯಾವುದೇ ಒಂದು ಅಭಿವೃದ್ಧಿ ಕಾರ್ಯಕ್ಕೆಂದು ಉಪಯೋಗಿಸಿಕೊಳ್ಳುತ್ತಾರೆ. ಹಾಗೂ ಅವರ ಪಕ್ಷ ಅಧಿಕಾರಕ್ಕೆ ಬಂದರೆ ರಸ್ತೆ, ದುರಸ್ತಿ, ಮಾಡಿಸುವುದು. ವಿದ್ಯುತ್ ಸೌಕರ್ಯ ಮಾಡಿಸುವುದು, ದೇವಸ್ಥಾನದ ಆವರಣ ನಿರ್ಮಿಸುವುದು ಈ ರೀತಿಯಾಗಿ ಹಲವಾರು ಕೆಲಸಗಳು ರಾಜಕೀಯ ಮುಖಂಡರಿಂದ ನಡೆಯುತ್ತವೆ, ಮತ್ತು ಭಕ್ತರಿಂದಲೂ ದೇವಸ್ಥಾನಕ್ಕೆ ಆದಾಯವೂ ಇದೆ. ಆ ಊರಿನ ಹಾಗೂ ಸುತ್ತಮುತ್ತಲಿನ ಗ್ರಾಮಗಳ ಭಕ್ತರು ಹಾಗೂ ದೇವರ ಜಾತ್ರೆಯ ಸಮಯದಲ್ಲಿ ಬಂದು ಧಾನ್ಯಗಳ ಮೂಲಕ ವಸ್ತುವಿನ ಮೂಲಕ ಆದಾಯವನ್ನು ಸುಗ್ಗಿಯ ಕಾಲದಲ್ಲಿ ಕೊಡುತ್ತಾರೆ. ದೂರ ದೂರ ಪ್ರದೇಶಗಳಿಂದ (ಬಳ್ಳಾರಿ, ಚಿತ್ರದುರ್ಗ, ಚಳ್ಳಕೆರೆ, ದಾವಣಗೆರೆ) ಬರುವ ಭಕ್ತರೂ ಕೂಡ ಕಾಣಿಕೆಗಳನ್ನು ದೇವಸ್ಥಾನದ ಆದಾಯಗಳಾಗಿವೆ.

ಈ ದೇವರ ಜಾತ್ರೆಯ ಸಂದರ್ಭದಲ್ಲಿ ವಿವಿಧ ಊರುಗಳಿಂದ ವ್ಯಾಪಾರಕ್ಕೆಂದು ಬಂದ ಕಿರಾಣಿ, ಹೋಟಲ್, ಹಾಗೂ, ನಾಟಕ ಕಂಪನಿ, ವ್ಯಾಪಾರಸ್ಥರು, ಸಾಮಾನುಗಳನ್ನು ಮಾರುವವರಿಗೂ ವ್ಯಾಪಾರಕ್ಕೆಂದು ಬಂದ ಎಲ್ಲಾ ವರ್ತಕರಿಂದ ನಿಗದಿ ಪಡಿಸಿದ ಹಣವನ್ನು ವಸೂಲು ಮಾಡುತ್ತಾರೆ. ಹೀಗೆ ಹಲವಾರು ರೀತಿಯಿಂದ ಹಣ ಸಂಗ್ರಹಣೆ ಮಾಡುತ್ತಾರೆ. ದೇವರ ಜಾತ್ರೆಯ ಸಮಯದಲ್ಲಿ ಊರಿನ ಪ್ರಮುಖರು ಬಿದಿರು ತರುವದಕ್ಕಾಗಿ ಸಂಡೂರು ಕುಮಾರಸ್ವಾಮಿ ಬೆಟ್ಟಕ್ಕೆ ಹೋಗುವ ಸಂದರ್ಭದಲ್ಲಿ ದಾರಿ ಮಧ್ಯದ ಖರ್ಚಿಗಿ ಈ ಹಣವನ್ನು ಬಳಸುತ್ತಾರೆ. ಮತ್ತು ಅನ್ನದಾಸೋಹಕ್ಕೆ ದವಸ ಧಾನ್ಯವನ್ನು ಬಳಸುತ್ತಾರೆ. ಅವರು ಬಿದಿರು ತಂದು ಉಪವಾಸದಿಂದ ಪೌಳಿ ಕಟ್ಟುತ್ತಾರೆ. ಈ ಎಲ್ಲಾ ಕಾರ್ಯಗಳಿಗೂ ಭಕ್ತರು ನೀಡುವ ಕಾಣಿಕೆಗಳಿಂದಲೇ ನಡೆಯುತ್ತವೆ. ಈ ವರ್ಷದ ಅವಧಿಯಲ್ಲಿ ದೇವರ ಹೊಸ ಗುಡಿ ಕಟ್ಟಿಸಲು ಸುಮಾರು ಸಾವಿರದಷ್ಟು ರೂಪಾಯಿ ಜನರು ಕಾಣಿಕೆ ಮತ್ತು ರಾಜಕೀಯ ಪಕ್ಷಗಳಿಂದ ಬಂದಿದೆ. ಮತ್ತು ದೇವರ ಜಾತ್ರೆಯಲ್ಲಿ ಮುಕ್ತಾಯದ ಸಮಯದಲ್ಲಿ ಹೂವಿನ ಹಾರಗಳು ಇನ್ನಿತರ ವಸ್ತುಗಳ ಹರಾಜಿಗೆ ಹಾಕುತ್ತಾರೆ. ಅದು ಸುಮಾರು ಸಾವಿರಾರು ರೂಪಾಯಿಗಳಿಗೆ ಭಕ್ತರು ಕೊಂಡುಕೊಳ್ಳುತ್ತಾರೆ. ಇಂಥ ವೆಚ್ಚಗಳಿಂದ ಸಂಗ್ರಹಿಸಿದ ಹಣ ಈ ವೆಚ್ಚಕ್ಕೆ ಬಳಸುವುದಾಗಿ ಕಂಡು ಬರುತ್ತದೆ. ಮತ್ತು ಸಂಗೀತವಾದ್ಯಗಳು ಹಾಗೂ ಇನ್ನಿತರ ವೆಚ್ಚಗಳನ್ನು ದೇವರ ಹಣದಿಂದ ಬರಿಸುತ್ತಾರೆ. ಹೀಗಾಗಿ ಆದರೆ ಆರ್ಥಿಕ ಸ್ಥಿತಿಯು ಸುಧಾರಿತ ಮಟ್ಟದಲ್ಲಿ ಕಂಡುಬಂದಿದೆ ಎಂದು ಹೇಳಬೇಕಾಗಿದೆ.

## ಅಡಿಟಿಪ್ಪಣಿ

೧. ಪ್ರೊ.ಹಿ.ಶಿ.ರಾಮಚಂದ್ರಗೌಡ, ಜಾನಪದ ಗೃಹಿಕೆ, ಪರಿಕಲ್ಪನೆ, ಪುಟ-xxxii

೨. ಉಮಾಪತಿ ಬಿ. ಕಡಲಬಾಳು ಆಂಜನೇಯ ಸ್ವಾಮಿ ಸಂಸ್ಕೃತಿ ಅಧ್ಯಯನ, ಪುಟ-೧೩

# ಅಧ್ಯಾಯ - ನಾಲ್ಕು

# ಮೌಖಿಕ ಪರಂಪರೆ

ಮೌಖಿಕ ಪರಂಪರೆಯು ಉದ್ದೇಶಪೂರ್ವಕವಾಗಿ ಸೃಷ್ಟಿಯಾದುದಲ್ಲ. ಅದು ಅಂದಿನ ಕಾರ್ಯಚರಣೆಗೆ ಅನುಗುಣವಾಗಿ ತಾನೇ ತಾನಾಗಿ ಸೃಷ್ಠಿಯಾದದು, ಬದುಕಿನೊಡನೆ ಬೆಸೆದುಕೊಂಡು ಬಂದದ್ದು. ಪರಂಪರಾನುಗತವಾಗಿ ಬಾಯಿಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಹರಿದು ಬಂದು ಶಾಬ್ಧಿಕ ಅಭಿವ್ಯಕ್ತಿ, ಸರಳ, ಸುಂದರ ಸೃಷ್ಟಿಯಿಂದಾಗಿ ವ್ಯಷ್ಟಿ ಸೃಷ್ಟಿಯಾದರೂ ಸಮಷ್ಟಿಯ ಸ್ವತ್ತಾದುದು. ವ್ಯಾಪಕತ್ವ ಇದರ ಲಕ್ಷಣವಾಗಿದ್ದು, ನಿರಂತರವಾಗಿ ಉಳಿದು ಬಂದ ವಾಕ್ ಸಂಪ್ರದಾಯವಾಗಿ ನೆಲೆನಿಂತಿದೆ. ಶಿಷ್ಟ ಸಾಹಿತ್ಯ ಜನಪದ ಸಾಹಿತ್ಯಕ್ಕಿಂತ ಭಿನ್ನವಾದದ್ದು ಉದ್ದೇಶಪೂರ್ವಕವಾದುದ್ದು. ವ್ಯಕ್ತಿಯೊಬ್ಬನಿಂದ ರಚಿತವಾದ ಬರವಣಿಗೆಯ ಮೂಲಕ ಉಳಿದು ಬರುವಂತಹ ಕಾಲದ ಯಾವುದೇ ವ್ಯತ್ಯಾಸಕ್ಕೆ ಗುರಿಯಾಗುವುದಿಲ್ಲ. ಇಲ್ಲಿ ಕರ್ತೃತ್ವದ ಅಧಿಕಾರವಿದೆ. ಶಿಷ್ಟ ಸಾಹಿತ್ಯದಲ್ಲಿ ವ್ಯಷ್ಟಿ ಅನಿಸಿಕೆಗಳಿಗೆ ಹೆಚ್ಚು ಪ್ರಾಧಾನ್ಯತೆ ಜನಪದ ಮತ್ತು ಶಿಷ್ಟ ಸಾಹಿತ್ಯಕ್ಕೆ ವ್ಯತ್ಯಾಸವಿರುವಂತೆ ಸಂಬಂಧವು ಇದೆ. ಶಿಷ್ಟ ಸಾಹಿತ್ಯಕ್ಕೆ ಜನಪದ ಸಾಹಿತ್ಯವೆ ಮೂಲ ಪ್ರೇರಕ ಶಕ್ತಿ. ಇವೆರಡು ಅಕ್ಕಪಕ್ಕದಲ್ಲಿ ಹರಿಯುವ ಝುರಿಗಳಿದ್ದಂತೆ ಪ್ರವಾಹ ಬಂದಾಗ ಒಂದರ ನೀರು ಮತ್ತೊಂದಕ್ಕೆ ಬೆರೆಯುವಂತೆ ಎರಡು ಪರಸ್ಪರ ಬೆರೆತಿವೆ. ಈ ರೀತಿಯಾಗಿ ಮೌಖಿಕ ರೂಪದ ಕಲೆಗಳಾಗಿ ವಿವಿಧ ರೀತಿಯ ಪರಂಪರೆಯನ್ನು ಕಾಣಬಹುದಾಗಿದೆ.

ಪರಂಪರೆಯು ಕೇಳಿದ್ದನ್ನು ನೆನಪಿಟ್ಟುಕೊಂಡ ನೋಡಿದ್ದನ್ನು ಅನುಸರಣೆ ಮಾಡುತ್ತಾ ಹೋಗುವಂತಹದ್ದಾಗಿದೆ. ಪರಂಪರೆ `ಪರಂಪರೆ` ಎಂಬುದು ಪೂರ್ವಿಕರಿಂದ ಬಂದಿರುವ ಅಭಿಪ್ರಾಯ ನಂಬಿಕೆ ಆಚಾರ ಸಂಪ್ರದಾಯ ರೂಢಿ ಪದ್ಧತಿ, ಮುಂತಾದವುಗಳೇ ಆಗಿದೆ. ಪ್ರಥಮದಲ್ಲಿ ಯಾವುದೇ ವ್ಯಕ್ತಿಯ ನಂಬಿಕೆ ಶ್ರದ್ಧೆಗಳು ಕ್ರಿಯಾತ್ಮಕವಾಗಿ ಆಚರಣೆಗಳಲ್ಲಿ ಸ್ಥಿರಗೊಂಡು ಕಾಲಕ್ರಮೇಣ ಸಾಮೂಹಿಕ ಕ್ರಿಯೆಗಳಲ್ಲಿ ಗಟ್ಟಿಗೊಂಡು ಸಾಂಪ್ರದಾಯಕವಾಗಿ ಸಾಗಿ ಬಂದಾಗ ಪರಂಪರೆಗೆ ಬದ್ಧವಾಗುತ್ತವೆ.

ಪರಂಪರೆ ನಿರ್ಮಾಣದಲ್ಲಿ ವೇದ, ಪುರಾಣ ರಾಮಾಯಣ ಮಹಾಭಾರತಗಳ ಪಾತ್ರವೂ ಮಹತ್ತರವಾದದು. ಇಂದಿನ ನಾಗರೀಕ ಜಗತ್ತಿನಲ್ಲಿ ಅವು ತಮ್ಮ ಸ್ಥಾನವನ್ನು ಕಳೆದುಕೊಳ್ಳಲು ತೊಡಗಿದ್ದರೂ ಜನಪದರ ನಂಬಿಕೆ, ಶ್ರದ್ಧೆ, ಆ ಮೂಲಕ ಪರಂಪೆಯನ್ನು ಉಳಿಸಿ ಬೆಳೆಸಿಕೊಂಡು ಬರುವಲ್ಲಿ ಅವೇ ಬಲವಾದ ಅಕರಗಳಾದವು. ಹಾಗೆಯೇ ಕಲ್ಲು, ಬಂಡೆ, ಕೋಟೆ, ಕೊತ್ತಲು, ಗುಡ್ಡ ಗಿಡಮರಗಳ ಬಗ್ಗೆ ಹುಟ್ಟಿಕೊಂಡ ಅದೆಷ್ಟೋ ಐತಿಹ್ಯ ದಂತ ಕಥೆಗಳ ಮೂಲಕ ನಂಬಿಕೆಗಳೇ ಆಗಿವೆ. ಭಾವುಕ ಸಮಾಜ ಜೀವಿಗಳಿಗೆ ತಮ್ಮ ಅರಿವಿಗೆ ನಿಲುಕದ್ದೆಲ್ಲವೂ ಅಗಮ್ಯ ಶಕ್ತಿಯು ಪ್ರತೀಕವಾದವು. ಪಂರಪರೆ ಎಂದರೆ ಸರಳವಾದ ಅರ್ಥದಲ್ಲಿ ಅನೇಕ ಕಾಲಗಳ ನಡವಳಿಕೆಯ ಮೊತ್ತ ಪರಂಪರೆ ಎಂಬುದು ಗುಂಪುಗಳು ಉಳಿದುಬೆಳೆಯಲು ಇರುವ ಅರಿವು. ಪರಂಪರೆಯ ಒಳಗೆ ಪ್ರತಿಯೊಂದು ವಸ್ತು, ವ್ಯಕ್ತಿ, ಸಂದರ್ಭಕ್ಕೆ ವಿಶಿಷ್ಟ ಅರ್ಥ ಇರುತ್ತದೆ. ಅರಿಶಿಣ, ಅಕ್ಕಿ, ಹೊರಗೆ, ಕೇವಲ ಪದಾರ್ಥಗಳು, ಆದರೆ ಪರಂಪರೆಯೊಳಗೆ ಅರಿಶಿಷಣದ ಅಕ್ಕಿ ಅರಿಶಿಧಾರ ಅರಿಶಿಣ-ಕುಂಕುಮ ಬದುಕಿನ ಒಂದೊಂದು ಸಾಂಕೇತಿಕ ಮೌಲ್ಯಗಳು, ಪರಂಪರೆ ಮನುಷ್ಯನ ಸಮಾಜ ವಿಜ್ಞಾನ ಅದು ನಿಂತು ಹೋದಾಗ ಸಂಪ್ರದಾಯವಾಗುತ್ತದೆ. ವಾಸ್ತವದಲ್ಲಿ ಪ್ರತಿಯೊಂದು ಸಂಪ್ರದಾಯವೂ ಪರಂಪರೆಯ ಪ್ರಕ್ರಿಯೆಯಿಂದ ತ್ಯಜಿಸಿ ಹೋದ ಭಾಗ, ಜನಪದವೊಂದರ ಅಸ್ತಿತ್ವ, ಅನನ್ಯತೆ ಎಂದರೆ ಅದರ ಪರಂಪರೆ ಎಂದು ತಿಳಿಯಬೇಕು.

ಪರಂಪರೆಯ ಯಾವುದೇ ಸಂಸ್ಕೃತಿಯ ಅಂಶಗಳನ್ನು ಮುಂದಿನ ಸಂಸ್ಕೃತಿಗೆ ತೆಗೆದುಕೊಂಡು ಹೋಗುವ ಬಲವಾದ ಚಲನಾತ್ಮಕ ಮೊತ್ತ ಸಂಸ್ಕೃತಿಯಲ್ಲಿರುವ ಧರ್ಮ, ನೈತಿಕ ನಿಯಮಗಳು ನುಡಿಗಟ್ಟುಗಳು, ನೀತಿ ಮತ್ತು ಸಾಮಾಜಿಕ ವರ್ತನೆ ಮುಂತಾದವುಗಳನ್ನು ಮುಂದಿನ ಸಂಸ್ಕೃತಿಗೆ ಸಾಗಿಸುವ ಒಂದು ಸಾಧನವಾಗಿದೆ. ಅದು ಒಂದು ಜನಾಂಗದ ರಾಷ್ಟ್ರೀಯತೆ, ಬಾತೃತ್ವ, ಜನರ ಐಕ್ಯತೆ ಮುಂತಾದ ಅಂಶಗಳನ್ನು ಮುಂದಿನ ಜನಾಂಗಕ್ಕೆ ಒಯ್ಯುವ ಸಾಧನವಾಗಿದೆ.

ಜನಪದರ ಪರಂಪರೆಯನ್ನು ರಾಜಕೀಯ, ಸಾಮಾಜಿಕ, ಮತ್ತು ಧಾರ್ವಿಕ ಈ ರೀತಿಯಾಗಿ ವಿಂಗಡಿಸಬಹುದು. ರಾಜಕೀಯ ಪರಂಪರೆಯಲ್ಲಿ ವ್ಯಕ್ತಿಗಳ ಹಾಗೂ ಸಮಾಜದೊಂದಿಗಿನ ಅವನ ನಡವಳಿಕೆಯನ್ನು ಆ ಮೂಲಕ ಇಡೀ ಸಮಾಜವನ್ನು ನಿಯಂತ್ರಿಸು ಅಲಿಖಿತ ಕಾನೂನು ಶಾಸ್ತ್ರವಾದರೆ ಸಾಮಾಜಿಕ ಹಾಗೂ ಧಾರ್ಮಿಕ ಪರಂಪರೆಗಳು ನೀತಿಶಾಸ್ತ್ರ ಬೋಧಿಸುವಲ್ಲಿ ಮಹತ್ತರವಾದವುಗಳಾಗಿವೆ. ಸಾಮಾನ್ಯವಾಗಿ ದೈವರಾಧನೆ, ಹಬ್ಬ ಹರಿದಿನಗಳು ಜಾತ್ರೆ ಉತ್ಸವಾದಿಗಳು ಮದುವೆ ಮುಂತಾದ ಜನನ ಮರಣ, ವ್ಯವಸಾಯ ಕಸುಬು, ಹಾಗೂ ಇತಿಹಾಸ ಚರಿತ್ರೆ, ಪುರಾಣ ಐತಿಹ್ಯ ಇತ್ಯಾದಿಗಳಿಗೆ ಸಂಬಂಧಿಸಿದ ಆಚರಣೆಗಳು ಪ್ರಮುಖವಾಗಿರುತ್ತವೆ. ಪರಂಪರೆ ಆಯಾ ಸಮಾಜದ ಒಟ್ಟಾರೆ ಸಂಸ್ಕೃತಿಯನ್ನು ನಿರ್ಧರಿಸುತ್ತದೆ.

ಆದಿಮಾನವನು ನಿಸರ್ಗ ಶಕ್ತಿಯಲ್ಲಿಟ್ಟ ನಂಬಿಕೆಯಿಂದ ಪಂಚಭೂತಗಳ ಆರಾಧನೆಗೆ ಮೊದಲಾಯಿತು. ದುಷ್ಟ ಶಕ್ತಿಗಳಿಗೆ ಭಯಗ್ರಸ್ಥರಾಗಿ ತನ್ನನ್ನು ರಕ್ಷಿಸಿಕೊಳ್ಳಲು ಮಾರಿ, ಮಸಣಿ, ದೆವ್ವ, ಭೂತ, ಪಿಶಾಚಿಗಳ

ಸಂತೃಪ್ತಿಗಾಗಿ ಮಕ್ಕಳನ್ನು ದನಕರು, ಆಡು ಕುರಿ ಕೋಣಗಳನ್ನು ಬಲಿ ಕೊಡುವಂತಾಯಿತು. ಪಾಪ ಪುಣ್ಯಗಳ ಕಲ್ಪನೆಯಲ್ಲಿ ಸ್ವರ್ಗ ನರಕಗಳು ಸೃಷ್ಟಿಯಾದವು. ಪುನರ್‌ಜನ್ಮಕ್ಕಾಗಿ ದಾನ, ಧರ್ಮ, ಪುಣ್ಯ, ಕರ್ಮ ಮಾಡುವ ನೀತಿ ಸಂಹಿತೆ ತಾನಾಗಿಯೇ ರೂಪಗೊಂಡಿತ್ತು. ದೈವಾರಾಧನೆ ಬದುಕಿನ ಒಂದು ಅವಿಭಾಜ್ಯ ಅಂಗವಾಗಿ ಶಿಷ್ಟ ದೇವತೆಗಳನ್ನು ಒಲಿಸಿಕೊಳ್ಳುವ, ದುಷ್ಟ ದೇವತೆಗಳನ್ನು ಸಂತೈಸುತ್ತ ಬಂದ ಮಾನವನ ಚಿತ್ತದಲ್ಲಿ ಅದ್ಭುತವಾದ ಕಲ್ಪನೆಗಳು ತೊಳಲಾಡಿದವು. ಒಬ್ಬೊಬ್ಬ ದೇವರುಗಳ ಕಾರ್ಯಭಾರವೇ ಬೇರೆ ಬೇರೆಯಾಗಿ ಭಕ್ತರಲ್ಲೂ ಪಂಗಡಗಳಾದವು. ಹೀಗಾಗಿ, ದೈವರಾಧನಾ ಮೂಲವಾದ ಧಾರ್ಮಿಕ ಸಂಪ್ರದಾಯ ಸಾಮೂಹಿಕ ಕ್ರಿಯೆಯಾಗಿಯೇ ಪರಂಪರೆಯಲ್ಲಿ ಭದ್ರಗೊಂಡಿತು.[೬] ಮದುವೆಯಲ್ಲಿ ಹಾಡುವ ಹಾಡುಗಳಲ್ಲಿ ಮದವೆಯ ಪದ್ಧತಿಯ ವಿವರಗಳಲ್ಲದೆ ಪ್ರೇಮ, ಪ್ರೀತಿ, ವಾತ್ಸಾಲ್ಯ, ಸ್ನೇಹ, ಬಾಂಧವ್ಯ ಇತ್ಯಾದಿ ಮಾನವೀಯ ಗುಣಗಳ ನಿಖರ ದಾಖಲೆಗಳಾಗಿವೆ. ಹತ್ತು ಸುಳ್ಳು ಹೇಳಿಯಾದರೂ ಒಂದು ಮದುವೆ ಮಾಡಬೇಕು ಎನ್ನುವ ಗಾದೆಯಂತೆ ಮನೋಭಾವದಲ್ಲಿ ಮದುವೆ ಮಾಡುವುದೊಂದು ಪುಣ್ಯದ ಕೆಲಸವೆಂದು ನಂಬಿಕೆಯು ಜನಮನದಲ್ಲಿ ಬೇರೂರಿದೆ. ಈ ನಂಬಿಕೆಯಿಂದಾಗಿಯೇ ಮದುವೆಯು ಪರಂಪರೆಯಲ್ಲಿ ಉಳಿದಿದೆ. ಒಂದು ಸಂಸ್ಕೃತಿಯ ನಂಬಿಕೆಗಳನ್ನು ಮುಂದಿನ ಸಂಸ್ಕೃತಿಗೆ ತೆಗೆದುಕೊಂಡು ಹೋಗುವುದು ಸಹ ಪರಂಪರೆಯಾಗಿರುತ್ತದೆ. ಅತ್ಯಾಧುನಿಕ ಎನ್ನಿಸಿಕೊಂಡ ಮನುಷ್ಯನಲ್ಲೂ ಪ್ರಾಕೃತ ಅಂಶಗಳು ಹೀಗೆ ಉಳಿದುಕೊಂಡು ಬಂದಿರುತ್ತವೆಯೇ ಹಾಗೆ ಪರಂಪರೆಯಿಂದ ಪಡೆದ ಅನುಭವ ನಂಬಿಕೆ ಜೀವನ ಮೌಲ್ಯಗಳ ಇತ್ಯಾದಿಗಳು ಮನಸ್ಸಿನ ಒಳಪದರದಲ್ಲಿ ತೂಕಡಿಸುತ್ತಾ ಸೃಜನಶೀಲಕಾರ್ಯಗಳಲ್ಲಿ ಮೈ ಪಡೆಯುತ್ತವೆ.

ಗ್ರಾಮದೇವರುಗಳು ನಿರ್ದಿಷ್ಟ ಗ್ರಾಮಗಳಲ್ಲಿ ನೆಲೆಗೊಳ್ಳುವ ವಿಧಾನ ಕುತೂಹಲಕಾರಿಯಾದುದಾಗಿದೆ. ಇದರ ಪೂರ್ವ ಸ್ಥಿತಿ ಜನತೆಯ ಸಂಕಷ್ಟದ ಕಾಲ ಎನ್ನಬಹುದು. ಅಥವಾ ಅವರು ದೇವರನ್ನು ಉಪೇಕ್ಷೆ ಮಾಡುವ ಸಂದರ್ಭ ಇರಬಹುದು. ಇಲ್ಲವೇ ಬದುಕಲು ದೈವದ ಅಗತ್ಯವನ್ನು ಮನಗಾಣದ ಮಾನಸಿಕ ಹಂತ ಎನ್ನಬಹುದು. ಇಂಥ ಸಂದರ್ಭದಲ್ಲಿ ಯಾವುದೇ ಒಂದು ಗ್ರಾಮಕ್ಕೆ ದೇವರುಗಳ ಪ್ರವೇಶವಾಗುತ್ತವೆ. ಊರಿಗೆ ಈ ದೇವರುಗಳ ಮಾಂತ್ರಿಕ ಆಗಮನ ಎನ್ನಬಹುದು. ಬಹಳ ಸಂದರ್ಭಗಳಲ್ಲಿ ಭಕ್ತರನ್ನು ದೇವರೇ ಸಂಪರ್ಕಿಸುವುದು ಇಲ್ಲಿನ ಸಾಮಾನ್ಯ ಅಂಶ. ದೇವರು ಭಕ್ತರಿಗೆ ನೆರವಾಗುವ ಬಯಕೆಯನ್ನು ವ್ಯಕ್ತಪಡಿಸುತ್ತದೆ. ಆ ಕಾರಣಕ್ಕಾಗಿ ತನ್ನ ಆರಾಧನೆಯನ್ನು ಮಾಡಬೇಕೆಂದೂ ಕೇಳಿಕೊಳ್ಳುತ್ತವೆ. ಭಕ್ತರು ಇದಕ್ಕೆ ದೇವರನ್ನು ತಮ್ಮ ಗ್ರಾಮದಲ್ಲಿ ಪ್ರತಿಸ್ಥಾಪನೆ ಮಾಡುತ್ತಾರೆ. ದೇವರ ಭಕ್ತರನ್ನು ಕನಸಿನಲಿ ಕಂಡು ಮಾತನಾಡಬಹುದು. ಇಲ್ಲವೇ ಅಶ್ಚರ್ಯಕರವಾದ ಸಂದರ್ಭವನ್ನು ಈ ಉದ್ದೇಶಕ್ಕಾಗಿಯೆ ಸೃಷ್ಟಿಸಿ ತಿಳುವಳಿಕೆಯನ್ನು[೭] ಕೊಡಬಹುದು. ಈ ಸಂಬಂಧವದಲ್ಲಿ ಕೆಲವು ಪುರಾಣ ಕತೆಗಳನ್ನು ಅವಲೋಕಿಸಬಹುದು.

ಗ್ರಾಮದೇವರುಗಳನ್ನು ಅರ್ಥೈಸಲು ಗ್ರಾಮ ಜೀವನದಲ್ಲಿ ಹಾಸುಹೊಕ್ಕಾಗಿರುವ ಪುರಾಣ ಕಥೆಗಳೇ ಆಧಾರ. ಈ ದೇವರುಗಳಿಗೆ ಸಂಬಂಧಿಸಿದ ವಿವರಗಳು ಐತಿಹ್ಯಗಳ ಉಲ್ಲೇಖಗೊಂಡಿರುವುದು.

ಆದ್ದರಿಂದ ಪುರಾಣ, ಐತಿಹ್ಯದಂಥ ಕಥೆಗಳನ್ನೇ ನಾವು ಅವಲಂಭಿಸಬೇಕಾಗಿದೆ, ಜನಪದ ಪುರಾಣ, ಪ್ರಪಂಚದಲ್ಲಿ ಜನಪದಪುರಾಣ ಪ್ರಪಂಚದಲ್ಲಿ ಗ್ರಾಮದೇವತೆಗಳ ವ್ಯಕ್ತಿತ್ವನ್ನೆಲ್ಲಾ ವಿವಿಧ ಮುಖಗಳಲ್ಲಿ ಪ್ರಕಟಗೊಂಡಿದೆ. ಪುರಾಣಗಳು ನಂಬಿಕೆಯ ಫಲ ನಂಬಿಕೆಗಳು ಅನುಭವದ ಪರಿಣಾಮ ಎಂಬ ಹೇಳಿಕೆಯನ್ನು ಗಮನಿಸಿದರೆ ಗ್ರಾಮದೇವತೆಗಳ ಮೂಲಕ ಜನಪದರು ಲೋಕವನ್ನು ಎದುರಿಸುವ ಪ್ರಯತ್ನ ಮಾಡಿರುವುದಕ್ಕೆ (ಉತ್ತರಗಳು) ಪುರಾವೆಗಳು ಸಿಗುತ್ತವೆ. ಪ್ರಚಲಿತವಾಗಿದ್ದ ಸಾಮಾಜಿಕ ಸಂಸ್ಥೆಗಳನ್ನು ಉಳಿಸಿಕೊಳ್ಳಲು ಪ್ರಾಚೀನ ಆಚರಣೆಗಳನ್ನು ಗಟ್ಟಿಗೊಳಿಸಲು ಈ ಪುರಾಣಗಳು ಸಾಧನಗಳಾಗಿ ಕಾರ್ಯ ನಿರ್ವಹಿಸಿವೆ. ಪುರಾಣಗಳು ಹಿಂದೆ ನಡೆದವು ಎನ್ನಲಾದ ದೇವಾನುದೇವತೆಗಳ ಚಟುವಟಿಕೆಗಳನ್ನು ವಿವರಿಸುತ್ತದೆ ಎನ್ನುವ ಮಾತು ಉತ್ಪ್ರೇಕ್ಷೆಯಲ್ಲ, ದೈವದ ಕಲ್ಪನೆಯ ಬೆಳವಣಿಗೆಗೆ ಪೀಠಿಕೆಯಂತೆ ಒಂದು ವಸ್ತು ಮೊದಲು ಸ್ಥಾಪನೆಯಾಗಬೇಕು. ನಂತರ ಆ ದೇವರಿಗೆ ಒಂದು ಪುರಾಣ ಪರಂಪರೆ ದಕ್ಕುತ್ತದೆ. ಅದರ ಗುಣಸ್ವಭಾವಗಳನ್ನು ಚಿತ್ರಿಸುವ ವರ್ಣಮಯ ಪುರಾಣಾವಳಿಗಳು ಹುಟ್ಟಿಕೊಳ್ಳುತ್ತವೆ. ಗ್ರಾಮದೇವರು ನಿರ್ದಿಷ್ಟ ಗ್ರಾಮಗಳಲ್ಲಿ ನೆಲೆಗೊಳ್ಳುವ ವಿಧಾನ ಕೂಡ ಕುತೂಹಲ ಕಾರಿಯಾಗಿದೆ. ಇದರ ಪೂರ್ವದ ಸ್ಥಿತಿ ಜನತೆಯ ಸಂಕಷ್ಟದ ಕಾಲ ಎನ್ನಬಹುದು. ಅಥವಾ ಅವರು ದೇವರನ್ನು ಉಪೇಕ್ಷೆ ಮಾಡಿದ ಸಂದರ್ಭ ಇರಬಹುದು. ಇಲ್ಲವೇ ಬದುಕಲು ದೈವದ ಅಗತ್ಯವನ್ನು ಮನಗಾಣದೇ ತೊಳಲಾಡುವ ಹಂತ ಎನ್ನಬಹುದು. ಇಂಥ ಸಂದರ್ಭದಲ್ಲಿ ಯಾವುದೇ ಒಂದು ಗ್ರಾಮಕ್ಕೆ ದೇವರುಗಳ ಪ್ರದೇಶವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಭಕ್ತರನ್ನು ದೇವತೆಯೇ ಸಂಪರ್ಕಿಸುವುದು ಇಲ್ಲಿನ ಸಾಮಾನ್ಯ ಅಂಶ ದೇವರು ಭಕ್ತರಿಗೆ ನೆರವಾಗುವ ಬಯಕೆಯನ್ನು ವ್ಯಕ್ತಪಡಿಸುತ್ತದೆ. ಆ ಕಾರಣಕ್ಕಾಗಿ ತನ್ನ ಆರಾಧನೆಯನ್ನು ಮಾಡಬೇಕೆಂದು ಕೇಳಿಕೊಳ್ಳುತ್ತದೆ. ಭಕ್ತರು ಇದಕ್ಕೆ ದೇವರುಗಳನ್ನು ತಮ್ಮ ಗ್ರಾಮದಲ್ಲಿ ಪ್ರತಿಷ್ಠಾಪನೆ ಮಾಡುತ್ತಾರೆ. ದೇವರು ಭಕ್ತರ ಕನಸಿನಲ್ಲಿ ಕಂಡು ಮಾತನಾಡುವುದು ಇಲ್ಲವೇ ಆಶ್ಚರ್ಯಕರವಾದ ಸಂದರ್ಭವನ್ನು ಈ ಉದ್ದೇಶಕ್ಕಾಗಿಯೇ ಸೃಷ್ಟಿಸುವುದು ಸಾಮಾನ್ಯ. ಅದೇ ರೀತಿ ಪ್ರಸ್ತುತ ಅಧ್ಯಯನದ ದೈವವಾದ ಶ್ರೀ ಮರುಕುಂಟ್ಲೇಶ್ವರ ದೇವರು ಕೂಡ್ಲಿಗಿ ತಾಲ್ಲೂಕಿನ ಗುಡೇಕೋಟೆ ಹೋಬಳಿಯ ಗಂಡ ಬೊಮ್ಮನಹಳ್ಳಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವ ಕೆ ದಿಬ್ಬದಹಳ್ಳಿಯಲ್ಲಿ ಕಂಡುಬರುತ್ತದೆ. ಶ್ರೀ ಮರುಕುಂಟ್ಲೇಶ್ವರ ದೇವರು ೧೯ನೇ ಶತಮಾದಲ್ಲಿ ಬಂದು ನೆಲೆಸಿದ ಪುರಾಣಕತೆಯನ್ನು ನೋಡಬಹುದಾಗಿದೆ. ಈ ಮೂಲಕ ಮರುಕುಂಟ್ಲೇಶ್ವರ ದೇವರು ದಿಬ್ಬದ ಹಳ್ಳಿಯಲ್ಲಿ ಬಂದು ನೆಲಸಿತು ಅದು ಅಂದರೆ ೨೦ನೇ ಶತಮಾನದ ಆರಂಭದಲ್ಲಿ ನೆಲೆಸಿರಬಹುದೆಂದು ಹಲವು ಹಿರಿಯರ ಹೇಳಿಕೆಯಾಗಿದೆ. ಇವರ ಪ್ರಕಾರ ದೇವರು ಮೊದಲು ಬಂದು ನೆಲಸಿದ್ದು ಶಿವಗಂಗೆಯಲ್ಲಿ ಎಂದು ತಿಳಿದುಬರುತ್ತದೆ.

೧೯ನೇ ಶತಮಾನಕ್ಕೆ ಹಿಂದೆ ಈ ದೇವರು ನೆಲೆಗೊಂಡಿದ್ದು ಮರುಕುಂಟೆಯಲ್ಲಿ. ಅದು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಒಂದು ಹಳ್ಳಿಯಾಗಿದೆ. ದಿಬ್ಬದಹಳ್ಳಿಯ ಪಾಪಯ್ಯ, ತಿಮ್ಮನಹಳ್ಳಿ,

ಪಾಲಯ್ಯ ಮತ್ತು ಎಕ್ಕೆಗೊಂದಿಯ ಕೆಂಗ್ನುಕಪ್ಲೆ ತಿಮ್ಮರೆಡ್ಡಿ ಈ ಮೂವರು ಆ ಕಾಲದಲ್ಲಿ ಮಳೆ ಇಲ್ಲದೆ ಬರಗಾಲ ಎದುರಿಸುವ ಸಮಯದಲ್ಲಿ ಊರಿನ ಕೆಲವು ಜನರ ಜೊತೆಯಲ್ಲಿ ವಲಸೆ ಹೋದರು ಮೊದಲು ನಾಯಕನ ಹಟ್ಟಿಯಲ್ಲಿ ಸಲ್ಪದಿನ ಕೆಲಸ ಮಾಡಿದ ನಂತರ ಚಳ್ಳಕೇರಿಯ ಮರುಕುಂಟೆಗೆ ಕೆಲಸ ಮಾಡಲು ಹೋದರು. ಕೆಲವು ದಿನದ ನಂತರ ಇವರ ಜೊತೆಗಿದ್ದ ಊರಿನಜನರು (ದಿಬ್ಬದಹಳ್ಳಿ) ತಮ್ಮ ತಮ್ಮ ಊರುಗಳಿಗೆ ಹಿಂದಿರುಗಿದರು. ಈ ಮೂವರು ಮಾತ್ರ ಅಲ್ಲಿಯೇ ಉಳಿದರು. ಮೊದಲನೆಯವನು ತಿಮ್ಮರೆಡ್ಡಿ, ಎರಡನೆಯವನು ಪಾಪಯ್ಯ ಮತ್ತು ಯರ‍್ರಯ್ಯ ಮೂರನೆಯವನು ಪಾಲಯ್ಯ ಇವರು ಗ್ರಾಮದಲ್ಲಿ ಕೆಲಸ ಮಾಡುವ ಸಮಯದಲ್ಲಿ ಪಾಪಯ್ಯ ಮತ್ತು ಪಾಲಯ್ಯರ ಕಣ್ಣಿಗೆ ಬರೀ ಕೋಲುಗಳೇ ಕಂಡವು. ಅದನ್ನು ಲೆಕ್ಕಿಸದೇ ಇವರು ಕೆಲಸವನ್ನು ಮುಂದುವರೆಸಿದರು. ಸಾಯಂಕಾಲ ಮಲಗುವ ಸಮಯದಲ್ಲಿ ಪಾಲಯ್ಯನಿಗೆ ಕೋಲಿನಿಂದ ಯಾರೋ ಬಂದು ಹೊಡೆದಂತಾಯಿತು. ಈ ವಿಷಯವನ್ನು ನೇರವಾಗಿ ಪಾಲಯ್ಯನು, ಪಾಪಯ್ಯ ಮತ್ತು ತಿಮ್ಮರೆಡ್ಡಿಗೆ ಹೇಳಿದನು. ನಂತರ ರಾತ್ರಿ ಮಲಗಿದ್ದಾಗ ಪಾಪಯ್ಯನ ನಿದ್ದೆಯಲ್ಲಿ ಬೆತ್ತದ ಕೋಲು ಬಂದು ನನ್ನನ್ನು ಇಲ್ಲಿಂದ ನಿಮ್ಮೂರಿಗೆ ಕರೆದುಕೊಂಡು ಹೋಗಿ ಪೂಜೆ ಮಾಡು ನಿನ್ನ ಕ್ಷೇಮವನ್ನು ನಾನು ಕಾಪಾಡುತ್ತೇನೆ ಎಂದು ಹೇಳಿತು. ಅದೇ ಒಂದು ಕನಸಿನ ವಿಚಾರವನ್ನು ಇಟ್ಟುಕೊಂಡು ಮೂವರು ಸೇರಿ ಮುಂಜಾನೆಯ ಬಾಗಿಲು ಮುಂದೆ ಬಿದ್ದ ಬೆತ್ತವನ್ನು ತೆಗೆದುಕೊಂಡು ಊರಿನ ಕಡೆ ಬರುವ ಸಮಯದಲ್ಲಿ ಒಂದು ಸಣ್ಣ ಆಕಳುಕರು ಸಿಕ್ಕಿತು. ಅದು ಪಾಲಯ್ಯನ ಕಣ್ಣಿಗೆ ದೇವರ ರೂಪದಲ್ಲಿ ತೋರಿಬಂತು. ಇದೇ ದೇವರು ಎಂದು ತಿಳಿದು ಆಕಳು ಮತ್ತು ಬೆತ್ತವನ್ನು ತೆಗೆದುಕೊಂಡು ನಾಯಕನ ಹಟ್ಟಿಗೆ ಬಂದರು. ನಾಯಕನ ಹಟ್ಟಿಯಲ್ಲಿ ಒಂದೆರಡು ದಿನದ ನಂತರ ಅಲ್ಲಿ ದೇವರ ಮಹಿಮೆ ಹೆಚ್ಚಾಯಿತು ನಂತರ ತಾಯಕನಹಳ್ಳಿಗೆ ಬಂದು ಅಲ್ಲಿಂದ ಮಂಗಳವಾದ್ಯ ಸಮೇತವಾಗಿ ನೇರವಾಗಿ ಶಿವಗಂಗೆಗೆ ಒಂದು ನೆಲೆಯೂರಿದರು. ಆ ಸಮಯದಲ್ಲಿ ಇಡೀ ಸುತ್ತಮುತ್ತಲಿನ ಊರುಗಳ ಭಕ್ತರೆಲ್ಲಾ ಒಂದೆಡೆ ಸೇರಿದರು. ಹೀಗೆ ಸೇರಿದ ಸ್ಥಳದಲ್ಲಿ ಒಂದು ಆಕಳ ಕರುವಿನಿಂದ ಐವತ್ತು ಅರವತ್ತು ದನಗಳಾದವು. ಅಲ್ಲಿ ಕಾಡು ಹತ್ತಿರವಿರುವುದರಿಂದ, ನೀರಿನ ಸೌಲಭ್ಯ ಇರುವುದರಿಂದ ಒಂದು ಹಟ್ಟಿಯಷ್ಟು ದನಗಳಾದವು. ಈ ಬೆತ್ತಕ್ಕೆ ಮೊದಲು, ಪೂಜೆ ಲಿಂಗಾಯ್ತರ ಜನರು ಮಾಡಿದರು. ಏಕೆಂದರೆ ನಾಯಕ ಮತ್ತು ಮಾದಿಗ ಜನಾಂಗದವರು ಸಮಾಜದಲ್ಲಿ ಕೆಳಮಟ್ಟದ ಸ್ತರದಲ್ಲಿ ಇರುವುದರಿಂದ ಮಾಂಸ, ಮಧ್ಯ ಹೆಣ್ಣಿನ ಸಹವಾಸ ಮಾಡಿದ್ದರಿಂದ ತಿಮ್ಮರೆಡ್ಡಿಯವರೇ ಮೊದಲ ಪೂಜೆಯನ್ನು ಮಾಡುತ್ತಿದ್ದರು. ನಂತರದ ಪೂಜೆಯನ್ನು ಪಾಪಯ್ಯ ಮಾಡಿದರೆ ದೇವರ ಉಳಿದ ಪೂಜೆ ಮತ್ತು ಕೆಲಸವನ್ನು ಪಾಲಯ್ಯನು ಮಾಡುತ್ತಿದ್ದನು.

ದೇವರು ಮಹಿಮೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ನಡೆಯಿತು ಭಕ್ತಾದಿಗಳ ಸಂಖ್ಯೆ ಹೆಚ್ಚುತ್ತಾ ಹೋಯಿತು. ಶಿವಗಂಗೆಯ ಎತ್ತಿನ ಕಿಲಾರಿ ಪಾಪಯ್ಯನು ಹಗಲಲ್ಲ ದನ ಕಾದು ಸಂಜೆ ಊಟಮಾಡಿ ದನದ ಹಟ್ಟಿಯಲ್ಲಿ ಮಲಗುತ್ತಿದ್ದನು. ಊರಿಗೆ ವಾರಕ್ಕೊಂದು ಸಾರಿ ಬಂದು ಹೆಂಡತಿ ಮಕ್ಕಳನ್ನು

ನೋಡಿಕೊಂಡು ಹೋಗುತ್ತಿದ್ದನು. ಒಂದು ದಿನ ೪ರ ಸುಮಾರಿಗೆ ಪೂರ್ವದಿಕ್ಕಿನಿಂದ ಗರ್ಭಿಣಿ ಹೆಣ್ಣು ಮಗಳು ಸಣ್ಣ ಮಗವನ್ನು ಕೈಯಲ್ಲಿ ಹಿಡಿದುಕೊಂಡು ನೀರು ನೀರು ಎನ್ನುತ್ತ ಬಾಯಾರಿ ಬಂದಳು ಅವಳಿಗೆ ಕಿಲಾರಿ ಪಾಪಯ್ಯ ತನ್ನ ಬೆತ್ತದಿಂದ ಒಣಗಿದ ನೆಲದಿಂದ ನೀರು ಬರುವಂತೆ ಮಾಡಿದ ಆ ಹೆಣ್ಣುಮಗಳು ನೀರು ಕುಡಿದು, ಆ ಹಟ್ಟಿಯಲ್ಲಿ ಅಂದು ರಾತ್ರಿ ಮಲಗಿದಳು. ಯಾವ ಊರು ಎಂದು ತಿಳಿಸದೇ ಬೇರೆ ಊರಿಗೆ ಹೋಗದೇ ಅದೇ ಹಟ್ಟಿಯಲ್ಲಿ ನಿಂತಳು ಮೂರು ನಾಲ್ಕು ದಿನಗಳ ನಂತರ ಒಂದು ಮಗುವಿಗೆ ಜನ್ಮನೀಡಿದಳು. ಅವರಿಗೆ ಕಿಲಾರಿ ಪಾಪಯ್ಯನು ಅಲ್ಲೇ ಗುಡಿಸಲು ಹಾಕಿ ಕೊಟ್ಟನು. ನಂತರ ಹಾಗೆಯೇ ಮೂರು ನಾಲ್ಕು ತಿಂಗಳು ಕಳೆದವು.

ಇತ್ತ ಪಾಪಯ್ಯನು ಊರಿನ ಕಡೆ ಜ್ಞಾನವನ್ನು ಮರೆತುಬಿಟ್ಟನು ಅವರಿಬ್ಬರೂ ಪರಸ್ಪರ ಆರ್ಕಷಣೆಯ ಮೂಲಕ ಕೂಡಿದರು. ಅವರಿಬ್ಬರಿಗೆ ಒಂದು ಗಂಡು ಮಗುವಿನ ಜನನವಾಯಿತು. ಈ ವಿಷಯವು ಊರಿನ ಕಡೆ ಪ್ರಸ್ತಾಪವಾಯಿತು. ಇದು ನೀಚ ಬುದ್ಧಿ ಎಂದು ಊರಿನ ಜನರು ಪಾಪಯ್ಯನನ್ನು ಬೈದರು ದನಗಳನ್ನು ಊರಿಗೆ ಕರೆತಂದರು. ಅವರಿಬ್ಬರಿಗೆ ಹುಟ್ಟಿದ ಮಗುವನ್ನು ಸೂಳೆಮಗ, ವೇಶಿಯಮಗ, ಎಂದು ತಿಳಿದರು. ತಂದೆ ಮಾತ್ರ ಒಬ್ಬನೇ, ಆದರೆ ದೇವರು ಮೊದಲನೆಯ ಪೂಜೆ ಮತ್ತು ಪೂಜಾರಿತನವನ್ನು ಮೊದಲ ಹೆಂಡತಿಯ ಮಕ್ಕಳು ಮಾಡಬೇಕು. ಎರಡನೇ ಪೂಜೆ ಈ ಸುಮಂಗಲಿಯ ಮಗ ಮಾಡಬೇಕು ಎಂದು ಊರಿನಲ್ಲಿ ತೀರ್ಮಾನವಾಯಿತು. ಅಂದಿನಿಂದ ಅವರು ವಂಶದಲ್ಲಿ ಈ ಪದ್ಧತಿ ನಡೆದುಕೊಂಡು ಬಂದಿದೆ.

ಈ ಕಡೆ ದೇವರ ಪವಾಡಗಳು ಹೆಚ್ಚುತ್ತಾ ಬಂದವು ಈ ಸಂದರ್ಭದಲ್ಲಿ ಎಕ್ಕೆಗೊಂದಿಯ ಲಿಂಗಾಯಿತರ ಮನೆಯಲಿದ್ದ ದೇವರ ದೈವರಾಧನೆ ಕ್ರಮದಲ್ಲಿ ಲೋಪವಾಯಿತು. ಲಿಂಗಾಯಿತರಲ್ಲಿ ಮನೆಯಲ್ಲಿನ ಮುಟ್ಟಿನ ದೋಷವು ಕ್ರಮಲೋಪಕ್ಕೆ ಕಾರಣವಾಗಿತ್ತು. ಆದ್ದರಿಂದ ದೈವದ ಮನಸ್ಸು ಚಂಚಲಗೊಂಡು ಮುಂಜಾನೆ ಐದರ ೫ ಸುಮಾರಿಗೆ ಆಕಾಶಮಾರ್ಗದಲ್ಲಿ ಸೂರ್ಯನನ್ನು ನುಂಗಲು ಹೋಗುತ್ತಿತ್ತು. ಆ ಸಮಯದಲ್ಲಿ ಅಲ್ಲಿದ್ದ ಕಿಲಾರಿ ಪಾಪಯ್ಯ ಮತ್ತು ಆತನ ಸಹೋದರ ಯರ್‍ರಯ್ಯ ಶರವೇಗದಲ್ಲಿ ಸೂರ್ಯನೆಡೆಗೆ ನುಗ್ಗುತ್ತಿದ್ದ ದೈವವನ್ನು ಕಂಡರು. ಮಾದಿಗರ ತಿಮ್ಮನಹಳ್ಳಿಯ ಪಾಲಯ್ಯನು ಈ ದೃಶ್ಯವನ್ನು ಕಂಡು ಕ್ಷಣಾರ್ಧದಲ್ಲಿ ಕಟ್ಟಿಗೆ ಸೇರಿಸಿ ಬೆಂಕಿ ಹೆಚ್ಚಿದನು. ಅದನ್ನು ಕಂಡ ದೈವವು ಇದು ಹಣ್ಣಲ್ಲ ಬೆಂಕಿ ಎಂದು ತಿಳಿದು ಹಿಂದಿರುಗಿತು. ದೇವರ ಹಿಂದೆ ಪಾಲಯ್ಯ ಮತ್ತು ಯರ್‍ರಯ್ಯನು ಓಡಿ ಹೋದರು. ಅವತ್ತಿನಿಂದ ಈವತ್ತಿನವರಿಗೆ ತಿಮ್ಮನಹಳ್ಳಿಯ ಮಾದಿಗ ಜನರು ದೇವರಿಗೆ ಅಗ್ನಿಕುಂಡವನ್ನು ಮಾಡಿದರು. ಅದೇ ರಾತ್ರಿಯ ಸಮಯದಲ್ಲಿ ಪಾಪಯ್ಯನ ಕನಸ್ಸಿಲ್ಲಿ ದೇವರು ನಿಜ ರೂಪಕಂಡು ಬಂದು ಹೇಳಿದನು.

ನನ್ನ ಜಾತ್ರೆಯು ಪ್ರತಿವರ್ಷವು ನಿಲ್ಲದೇ ಮಾಡಬೇಕು, ಊರು ಬಿಟ್ಟು ಹೊರಗಡೇ ವಿಶಾಲವಾದ ಸ್ಥಳದಲ್ಲಿ ಜನರ ಹಂಬಲದಿಂದ ಜಾತ್ರೆಯು ನಡೆಯಬೇಕು. ಒಂದು ವರ್ಷ ಬಿಟ್ಟು ಒಂದು ವರ್ಷವು

ಹುರಡಿಹಳ್ಳಿ ರಂಗಯ್ಯನದುರ್ಗದಕೆರೆಗೆ ಗಂಗೆಪೂಜೆಗೆ ಹೋಗಬೇಕು. ನನ್ನ ಭಕ್ತರಿಗೆ ಯಾವುದೇ ರೀತಿಯಲ್ಲಿ ಅನ್ಯಾಯ ಮಾಡುವಂತ್ತಿಲ್ಲ, ಪ್ರತಿವರ್ಷ ನಾನು ಇದ್ದಲ್ಲಿನಿಂದ ಹೊಸ ಪೌಳಿಯ ತನಕ ಮಡಿವಳಾರ ತಿಪ್ಪಯ್ಯನು ಕಾಲಿಗೆ ಮಡಿಹಾಸಬೇಕು. ಬುಡ್ಡೀಕಲ್ಲುಗೆ ಎಳೆಯ ಕುರಿಮರಿಬಲಿಕೊಡಬೇಕು. ಪ್ರತಿ ವರ್ಷವು ಜಾತ್ರೆಗೆ ಸಂಡೂರು ಕುಮಾರಸ್ವಾಮಿಬೆಟ್ಟದಿಂದ ಬಿದುರು ತಂದು ಹೊಸ ಪೌಳಿ ಕಟ್ಟಬೇಕು, ಮೊದಲ ಪೂಜೆ ತಿಮ್ಮರೆಡ್ಡಿ ಮಾಡಬೇಕು. ಎರಡನೇ ಪೂಜೆ ನೀವು ಮಾಡಬೇಕು ಇನ್ನಿತರ ಕಾರ್ಯ ಮತ್ತು ಅಗ್ನಿಕೊಂಡದ ಕೆಲಸ ತಿಮ್ಮನಹಳ್ಳಿಯ ಹರಿಜನರಿಗೆ ಸೇರಬೇಕು ಎಂದು ಹೇಳಿ ದೇವರು ಮಾಯವಾಯಿತು. ಮುಂಜಾನೆ ಎದ್ದು ಪಾಪಯ್ಯ ಗ್ರಾಮದ ಎಲ್ಲಾ ಜನರನ್ನು ಕರೆಸಿಕೊಂಡು ರಾತ್ರಿ ಕನಸಿನಲ್ಲಿ ನಡೆದ ಎಲ್ಲಾ ವಿಚಾರವನ್ನು ಜನರಿಗೆ ಹೇಳಿದನು. ಅಂದಿನಿಂದ ಇಂದಿನವರೆಗೆ ಅದೇ ರೀತಿ ಮುಂದುವರೆಯುತ್ತ ಬಂದಿದೆ. ಅದೇ ಸಂದರ್ಭದಲ್ಲಿ ಎಕ್ಕೇಗೊಂದಿಯಿಂದ ದಿಬ್ಬದಹಳ್ಳಿಗೆ ದೇವರು ಬಂದು ನೆಲೆಯೂರಿತು.

ಶ್ರೀ ಮರುಕುಂಟ್ಲೇಶ್ವರ ದೇವರ ಅಂಗರಕ್ಷಕರಾದ ಗಾದ್ರಯ್ಯ ಮತ್ತು ಬೋಸೆದೇವರುಗಳು ಜೋತೆಯಲ್ಲಿ ಕೂಡಿದವು. ಭಕ್ತಾದಿಗಳು ಈ ದೇವರುಗನ್ನು ಶ್ರೀ ಮರುಕುಂಟ್ಲೇಶ್ವರ ಸ್ವಾಮಿಯ ಸಾಮಂತರು ಎಂದು ಭಾವಿಸಿದರು. ದೈವವು ಮೊದಲು ನೆಲೆಸಿದ ಸ್ಥಳದಲ್ಲಿ ಊರಿನ ಜನರು ಮತ್ತು ಸುತ್ತಮುತ್ತಲಿನ ಜನರು ಕೂಡಿ ಶಿವಗಂಗೆಲ್ಲಿ ಕೆರೆಯನ್ನು ಕಟ್ಟಿದರು. ಅದನ್ನು 'ಶಿವಗಂಗೆ ಕೆರೆ' ಅಥವಾ 'ದೇವಗಂಗೆಕೆರೆ' ಎಂದು ಕರೆಯುತ್ತಾರೆ. ಅಲ್ಲಿ ಕಂಡು ಬರುವ ದೈವದ ಎದುರಿನ ರಕ್ಕಸಿಕಲ್ಲುಗಳು, ವೀರಗಲ್ಲುಗಳು, ಕೊಡಿದುರುಗಮ್ಮ, ಯರಬಾಲನಾಯ್ಕನಕಟ್ಟೆ, ಲಿಂಗಾದಕಾಯಿ, ನಾಗರಹೆಡೆ, ಮಲಿಯಮ್ಮನ ಗುಡಿ ಕಂಡುಬಂದಿವೆ.

ಶಿವಗಂಗೆಯಲ್ಲಿ ಸಣ್ಣ ಪುಟ್ಟ ದೇವರ ಗುಡಿಗಳು ಕಂಡು ಬಂದಿವೆ. ಮತ್ತು ಕಿಲಾರಿ ಪಾಪಯ್ಯನು ವಾಸಮಾಡಿದ ದನದ ಹಟ್ಟಿಯಲ್ಲಿ ರಕ್ಕಸಿಯ ಜೊತೆಯಲ್ಲಿ ದೇವರು ಹೋರಾಡಿದ ಪ್ರತಿಮೆ ಕಂಡು ಬಂದಿದೆ. ಮತ್ತು ದೇವರ ದನಗಳನ್ನು ಕಳ್ಳರು ಬಂದು ತೆಗೆದುಕೊಂಡು ಹೋಗುವಾಗ ಕಳ್ಳರಿಗೆ ಕಣ್ಣುಕಾಣದೇ ಕಲ್ಲಾಗಿ ನಿಂತಿರುವ ಕಲ್ಲುಗಳು ಕಂಡುಬಂದಿವೆ.

ಶ್ರೀ ಮರುಕುಂಟ್ಲೇಶ್ವರ ದೇವರನ್ನು ಚನ್ನಬಸವಣ್ಣ, ಚನ್ನಪ್ಪ, ಗಾದ್ರಯ್ಯ, ಮರುಕುಂಟ್ಲುಯ್ಯ, ಸ್ವಾಮಿ, ಈಗೇ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಮರುಕುಂಟ್ಲೇಶ್ವರ ಎಂದರೆ ಈಶ್ವರನ ಅವತಾರ, ಶಿವನ ಅವತಾರ ಶಿವನ ಜಡೆಯಲ್ಲಿ ಗಂಗೆಯ ರೂಪ ಕಂಡು ಬಂದಿದೆ. ಇದರಿಂದ ಶಿವನು ಗಂಗೆ ಜೊತೆಯಲ್ಲಿ ಇದ್ದಾಗೇ ಮರುಕುಂಟ್ಲೇಶ ಗಂಗೆಯಲ್ಲಿ ಒಂದು ಸನ್ನಿದನ ಮತ್ತು ಶಿವನ ರೂಪವನ್ನು ಮರುಕುಂಟ್ಲೇಶ್ವರ, ಬೆತ್ತ-ತ್ರಿಶೂಲ ರೂಪ, ಶಂಖು-ಪಾವಡಗಳ ರೂಪ, ದನಗಳು ಶಿವವಾಹನದ ರೂಪವಾಗಿ ಕಂಡು ಬಂದಿದೆ.

ದೇವರಿಗೆ ಮತ್ತು ರಕ್ಕಸರಿಗೆ ಯುದ್ಧ ನಡೆಯುವ ಸಂದರ್ಭದಲ್ಲಿ ಕೆಲವು ದೇವತೆಗಳು ಮುಖ್ಯ ಪಾತ್ರವಹಿಸಿಕೊಂಡಿವೆ. (ಅವುಗಳೆಂದರೆ ಕೂಡಿದುರುಗಮ್ಮ ಮಲಿಯಮ್ಮ, ಗಾದ್ರಯ್ಯ) ಈ ಯುದ್ಧದ

ಆಯುಧಗಳು ಮಣ್ಣಿನಲ್ಲಿ ಮುಚ್ಚಿಕೊಂಡವೆ, ಏಕೆಂದರೆ ಹೈದರಾಲಿ ಮತ್ತು ಇಂಗ್ಲೀಷರ ನಡುವೆ ೧೭೭೨ರಲ್ಲಿ ಎರಡನೇ ಅಂಗ್ಲೋ ಮೈಸೂರು ಯುದ್ಧ ನಡೆಯಿತು. ಈ ಯುದ್ಧದ ಭಯದಿಂದ ನಮ್ಮ ಮೇಲೆ ಬಂದು ನಮ್ಮ ಆಯುಧಗಳನ್ನು ಕಸಿದುಕೊಳ್ಳುತ್ತಾರೆ ಎಂಬ ಭಯದಿಂದ ಮಣ್ಣಿನಲ್ಲಿ ಹಾಕಿ ಮುಚ್ಚಿದರು. ಎಂದು ಹಿರಿಯರು ಹೇಳಿದ್ದಾರೆ.

ಈ ಎಲ್ಲಾ ಕಥೆಯನ್ನು ಊರಿನ ಹಿರಿಯರು ಮತ್ತು ಸುತ್ತ ಮುತ್ತ ಇರುವ ಊರುಗಳ ಪ್ರಮುಖ ವ್ಯಕ್ತಿಗಳಿಂದ ಮತ್ತು ಪೂಜಾರಿಯ ವಂಶಸ್ಥರಿಂದ ಕಲೆಹಾಕಲಾಗಿದೆ. ಈ ಕಥೆಯು ದೇವರು ಗ್ರಾಮಗಳಲ್ಲಿ ಕಂಡುಬಂದಿದೆ. ಏಕೆಂದರೆ ಪುರಾಣಕಥೆಗಳು ಹದಿನೆಂಟು ಸಂಧಿಗಳನ್ನು ಹೊಂದಿದ್ದು, ಒಂದೊಂದು ಸಂಧಿಯು ಒಂದೊಂದು ಹಂತವನ್ನು ತಿಳಿಸುತ್ತವೆ. ಇದರಲ್ಲಿ ಜನನ ಪವಾಡ ನಿರ್ವಾತದ ಬಗ್ಗೆ ಕಥೆಗಳ ಕಂಡುಬಂದಿವೆ.

### ೪.೧. ಸೊಬನದ ಹಾಡುಗಳು

ಸೊಬನದ ಹಾಡುಗಳನ್ನು ಜನಸಮಾನ್ಯರು ಅಥವಾ ಜನಪದರು ಯಾವುದೇ ಶುಭ ಸಂದರ್ಭದಲ್ಲಿ ಜಾತ್ರೆ, ಹಬ್ಬ ಹರಿದಿನಗಳಲ್ಲಿ ದೇವರ ಮೇಲೆ, ಮತ್ತು ಇನ್ನಿತರ ಕಾರ್ಯಗಳ ಮೇಲೆ ಸೊಬನದ ಹಾಡುಗಳನ್ನು ಆಡುತ್ತಾರೆ. ಅದೇ ರೀತಿ ಪ್ರಸ್ತುತ ದೈವವಾದ ಶ್ರೀಮರುಕಂಟ್ಲೇಶ್ವರ ದೇವರ ಮೇಲೆ ಜನಸಮಾನ್ಯರು ಸೊಬನದ ಹಾಡಿನ ಮೂಲಕ ದೇವರು ಹುಟ್ಟು, ಬೆಳವಣಿಗೆ, ನೆಲೆಗೊಂಡ ಕ್ಷೇತ್ರ ಮತ್ತು ಆಚರಣೆ, ಸಂಪ್ರದಾಯಗಳ ಮೇಲೆ ಸೋಬನದ ಹಾಡುಗಳನ್ನು ಆಡುತ್ತಾರೆ. ಅವುಗಳೆಂದರೆ ಈ ಕೆಳಗಿನಂತೆ ನೋಡಬಹುದಾಗಿದೆ.

ಅಪ್ಪಾ ನೀನುಹುಟ್ಟಿದ್ದು ಬುಕ್ಕವತ್ತಿ ಪಟ್ಟಣ |
ಅಪ್ಪಾಟ್ಟು ಅಪ್ಪಾ ಬೆಳದಾನ |
ಅಪ್ಪಾಟ್ಟು ಅಪ್ಪಾ | ಬೆಳದಾನ ಚನ್ನಣ್ಣ ||
ಎಪತ್ತು ರಾಜ್ಯಕ್ಕೆ ಹೆಸರಾಗಿ ||

ಅಣ್ಣ ನೀನು ಹುಟ್ಟಿದ್ದು ಚನ್ನಗಿರಿ ಪಟ್ಟಣ |
ಅಣ್ಣುಟ್ಟ ಅಣ್ಣ | ಬೆಳದನ
ಅಣ್ಣಟ್ಟ ಅಣ್ಣಾ ಬೆಳದಾನ | ಚನ್ನಣ್ಣ
ಹನ್ನೊಂದು ರಾಜ್ಯಕ್ಕೆ ಹೆಸರಾಗಿ |

ಬೇಸಾನೆ ಪಟ್ಟದ ಗುರುಸ್ವಾಮಿ ಬಂದರೆ |
ಸಣ್ಣ ಗಂಬಳಿ ನಿಧಿ ಹಾಸಿ|
ಸಣ್ಣ ಗಂಬಳಿ ನಿಧಿಹಾಸಿ | ತಂದರೆ

ಹನ್ನೊಂದು ಸಾವಿರ ಕೈ ಗೂಡಿ|
ಹೊನ್ನೆಂದು ಸಾವಿರ ಕೈಗೂಡಿ | ತಂದರೆ
ಸ್ವಾಮಿ ಚನ್ನಪ್ಪನ ದೌವಲತ್ತು |

ಗದ್ದಿಗೆ ಹಾಕಕೇ ದೊಡ್ಡ ಕಂಬಳಿ ಕೂಡಿರಿ
ದೊಡ್ಡ ಮಲ್ಲಿಗೆ ನಿಧಿ ವಯ್ಯಾರ್ರಿ
ದೊಡ್ಡ ಮಲ್ಲಿಗೆ ನಿಧಿ ವಯ್ಯಾರ್ರಿ | ಚನ್ನಪ್ಪನ
ದೊಪದಾರುತಿ ತೊಡುರ್ರಿವರಕ್ಕೆ |
ದೋಪದರುತಿ ತೊಡುರ್ರಿವರಕ್ಕೆ | ನಾಯನಹಟ್ಟಿ
ಲೋಬನ ಬಲರಿ ಬಳಲಿಂದ |

ಪೂಜೆ ಮಾಡಕ ಸಣ್ಣಗಂಬಳಿ ಕೂಡಿರಿ
ಸಣ್ಣ ಮಲ್ಲಿಗೆ ನಿಧಿ ವೈಯಿದು
ಸಣ್ಣಮಲ್ಲಿಗೆ ನಿಧಿ ವೈಯೆದು | ಚನ್ನಪ್ಪನ
ವಿಳಗಾಯಿ ಕೂಡಿರಿ ಒರೆಯಕ
ವಿಳಗಾಯಿ ಕೂಡಿರಿ ಒರೆಯಕ | ನಾಯಕನಹಟ್ಟಿ
ಹೊಂಬಳೆ ಬರಲಿ ಹೊಳೆಲಿಂದ ||

ಅಪ್ಪಾನ ಪೂಜೆ | ಮಾಡೋ ಚಿಕ್ಕಮೆಗನೇ ಪಾಪಣ್ಣ
ಅಪ್ಪಾಗೆ ನಿನಗೆ ನಿನೋವಾಗಿ |
ಅಪ್ಪಾಗೆ ನಿನಿಗೆ ನೀನೋವಾಗಿ ||ದಿಬ್ಬದಹಳ್ಳಿ||
ಅಪ್ಪಾ ಚನ್ನಣ್ಣ ಓಲಿದನಾ ||

ಅಪ್ಪಾ | ಪೂಜೆ ಮಾಡೋ ಸಣ್ಣ ಮಗನೇ |ಚನ್ನಣ್ಣ|
ಅಣ್ಣಾನೈನಗೆ ನಿನಗೆ ನಿಲುವಾಗಿ|
ಅಣ್ಣಾನೈನಿಗೆ ನಿನಗೆ ನೀಲುವಾಗಿ ||ದಿಬ್ಬದಹಳ್ಳಿ||
ಸ್ವಾಮಿ ಚನ್ನಪ್ಪ ಒಲಿದಾನ||

ದೇವರ ಹೊರಲಕ್ಕೆ ಯಾರಾರು ಬರಬೇಕು
ಊರು ಗೌಡರ ರೈತರು |
ಊರು ಗೌಡರ ರೈತರು ||ತಿಮ್ಮರೆಡ್ಡಿ||
ಸ್ವಾಮಿಗೆ ಅಪ್ಪಾಣೆ ಕೋಡು ಬನ್ನಿ ||

ದೇವರು ಹೊರಸಾಕೆ ಯಾರಾರು ಬರಬೇಕು
ಹಟ್ಟಿ ಗೌಡರು ಯಜಮಾನ
ಹಟ್ಟಿ ಗೌಡರ ಯಜಮಾನ |ತಿಮ್ಮರೆಡ್ಡಿ
ಸ್ವಾಮಿಗೆ ಅಪ್ಪಾಣೆ ಕೊಡು ಬನ್ನಿ ||

ದೇವರು ಹೊರಲಕ್ಕೆ ದೊಡ್ಡ ಗಂಬಳಿ ಬೇರು |
ರೆಟ್ಟಿಗೆ ತಾಯಿತ್ವ ಮಣಬೇಕು ||
ರೆಟ್ಟಿಗೆ ತಾಯತ್ವ ಮಣಬೇಕು |ಗೌಡರ|
ಮಣಗಳೆಲ್ಲಿ ಕಂದನ ಕಂಚಿನ ಕಳವಳ ||

ಪಟ್ಟಿ ಹೊರಲಕ್ಕೆ ಸಣ್ಣಗಂಬಳಿಬೇಕು
ಕನ್ಯೆಗೆ ತಾಯಿತ್ವವ ಮಣಿಬೇಕು |
ಕನ್ಯೆಗೆ ತಾಯಿತ್ವದ ಮಣಿಬೇಕು |ಕಂದನ|
ಕಂಚವ್ವ ಕಳವಳ ||

ಅಪ್ಪಾ ನಿನ್ನರವರು ತುಪ್ಪಾದ ಮೈವವರು
ಚಿಕ್ಕ ರುದ್ರಾಕ್ಷಿ ಸರದವರು |
ಚಿಕ್ಕ ರುದ್ರಾಕ್ಷಿ | ಸರದವರು |ಪಾಪಣ್ಣ|
ಅಪ್ಪಾಯ್ಯಗೆ ಹೆಗಲು ಕೂಡು ಬನ್ನಿ||

ಸ್ವಾಮಿ ನಿನ್ನರುವರು ಹಾಲಂಡ ಮೈಯವರು
ಸಣ್ಣ ರುದ್ರಾಕ್ಷಿ ಸರದವರು |
ಸಣ್ಣ ರುದ್ರಾಕ್ಷಿ ಸರದವರು |ಪಾಪಣ್ಣ|
ಅಣ್ಣಾಯ್ಯಗೆ ಹೆಗಲು ಕೂಡ ಬನ್ನಿ ||

ಬಾಗಿದ ಬಾಗಲು ಪೌಳಿಯ ನೋಡ್ಯಾರು|
ಪೌಳಿಯ ಮೇಲೆ ಶಿಖರವು
ಪೌಳಿಯ ಮೇಲೆ ಶಿಖರವು |ಚನ್ನಪ್ಪನ
ಶಿಖರಕ್ಕೆ ಕೈ ಮುಗಿದಾವು||

ಅಪ್ಪಾನೇ ಚನ್ನಪ್ಪ ಹಾಲಿನ ರುಚಿಗಾರ
ಇನ್ನಲ್ಲಿ ತರಲಿ ಶಾಬುರಾಯಿ|
ಇನ್ನಲ್ಲಿ ತರಲಿ ಶಬುರಾಯಿ |ಚನ್ನಣ್ಣ|
ಸಚ್ಚಲು ಮಣಕ ಸ್ವಾಮಿ ಚನ್ನಪ್ಪನ ಮಠದಾಗಾ||

ಅಪ್ಪಾನೆ ಚನ್ನಪ್ಪ ತುಪ್ಪದ ರುಚಿಗಾರ
ಮತ್ತಲ್ಲಿ ತಾರುಲಿಶಬರಾಯಿ|
ಮತ್ತಲ್ಲಿ ತಾರುಲಿ ಶಬರಾಯಿ |ಚನ್ನಣ್ಣ|
ಕೆಂದುಮಣಕ ಸ್ವಾಮಿ ಚನ್ನಪ್ಪನ ಮಠದಾಗ||

ಹೂವಿಲ್ಲವೆಂದು ಹೂವಿಗೊಂದಂದಿರಿ|
ಹೂ ಚನ್ನಪ್ಪನ ಮಠದಿಂದೆ|
ಹೂ ಚನ್ನಪ್ಪನ ಮಠದಿಂದೆ |ಮಲ್ಲಿಗೆ|
ಹೂ ಬಾಯಿ ಬಿಡುತ್ತವೆ||

ಮಗ್ಗೆ ಇಲ್ಲವೆಂದು ಮಗ್ಗಗೂದರೇ
ಮಗ್ಗ ಚನ್ನಪ್ಪನ ಗುಡಿ ಹಿಂದೆ|
ಮಗ್ಗೆ ಚನ್ನಪ್ಪನ ಗುಡಿ ಹಿಂದೆ |ಮಲ್ಲಿಗೆ|
ಮಾಗ್ಗರಳಿ ಬಾಯಿ ಬಿಡುತ್ತಾವೆ

ಅಲ್ಲಿ ಇಲ್ಲಿ ಹೂ ವಲ್ಯನ ಚನ್ನಣ್ಣ|
ಅಲ್ಲಿ ನಾಯಕನಹಟ್ಟಿ ಹಲಿಗಾನ||
ಅಲ್ಲಿ ನಾಯಕನಹಟ್ಟಿ |ಹಲಿಗಾನ|
ಹಾಲೇವುವ ಮಲ್ಲಿಗೆ ಸರಮಾಡಿದವೆ

ಅತ್ತಲಿತ್ತಲೂರುಮೆ ಒಪ್ಪನೇ ಚನ್ನಣ್ಣ|
ಆದಿ ತಾಯಕನಹಳ್ಳಿ |ಹೊಸರುಮೆ|
ಅದಿ ತಾಯಕನಹಳ್ಳಿ ಹೊಸರುಮೆ||
ಬಾರಲೆಂದು ಸ್ವಾಮಿ ಚನ್ನಪ್ಪನ ಮರೆದನ

ಇಪ್ಪತ್ತೂರುಮೆ ಅಪ್ಪಾಗ ವಲಗ|
ಮತ್ತೆ ಹೊರಡರು ಬೈಲಿಗ|
ಮತ್ತೆ ಹೊರಡರು ಬೈಲಿಗೆ |ದಿಬ್ಬದಹಳ್ಳಿ|
ಗೌಡರ ಇಲ್ಲದೆ ಹೂರ ಹೂಂಡು|

ಹೆನ್ನೊಂದು ಉರುಮ ಅಣ್ಣನಿಗೆ ವಾಲುಗ|
ಇನ್ನು ಹೊರಡರು ಬೈಲಿಗೆ|
ಇನ್ನೂ ಹೊರಡಲು ಬೈಲಿಗೆ |ದಿಬ್ಬದಹಳ್ಳಿ|
ರೈತರಿಲ್ಲದ ಹೊರ ಹೊಂಡ||

ಅಪ್ಪಾಯ್ಯ ಎದ್ದಾನೆ ಮತ್ತಳೇರೀ ರಹಣ್ಯವ
ಬಿಟ್ಟು ಮುತ್ತುಗಳ ಜಡವತ್ತು||
ಅಣ್ಣಯ್ಯ ಎದ್ದಾನೆ ಇನ್ನೊಳೆರಿ ರಹಣ್ಯವ
ಜಾತಿ ಮುತ್ತುಗಳು ಜಡೆಯಲ್ಲಿ||

ಎತ್ತು ಮರಪಿಕೊಂಡು ದೇವರ ಹೊರಸಿಕೊಂಡು|
ಹಟ್ಟಿ ಮೊಸರನ್ನು ಕರೆಕೊಂಡು||
ಹಟ್ಟಿ ಮೊಸರನ್ನು ಕರೆಕೊಂಡು|
ಹುರುಡಿಹಳ್ಳಿ ಚಿಕ್ಕ ಶಿವಗಂಗೆ ಇಳಿದರು||

ಹಟ್ಯಗ ಚನ್ನಪ್ಪ ರೊಚ್ಚಿದ್ದು ಬರುವಾಗ|
ಎಚ್ಚರಿಲ್ಲರುವರು ಗೌಡರಿಗೆ||
ಎಚ್ಚರಿಲ್ಲರವರಿ ಗೌಡರ ಹೆಣ್ಣು ಮಕ್ಕಳಿಗೆ||
ಮುತ್ತಿನ ಆರತಿ ಬರಲಿಲ್ಲ||

ಪೌಳ್ಯಾಗ ಚನ್ನಣ್ಣ ದೊಳೆದ್ದು ಬರುವಾಗ
ನಿಟ್ಟುಲ್ಲ ಊರು ರೈತರಿಗೆ
ನಿಟ್ಟುಲ್ಲ ಊರು ರೈತರಿಗೆ||
ಹೆಣ್ಣು ಮಕ್ಕಳು ಹೋಕಳಾರತಿ ಬರಲಿಲ್ಲ||

ಊರು ದಿಬ್ಬದಹಳ್ಳಿ ವಾರಿಲಿ ಬಾವಿ ನೀರು|
ತೀರಿದಗಂಳಕ್ಕೆ ಸೆಳೆಯವು|
ತೀರಿದಗಂಳಕ್ಕೆ ಸೆಳೆಯೆವು |ದಿಬ್ಬದಹಳ್ಳಿ|
ಸ್ವಾಮಿ ಎಂದು ಬರುವ ರಾಸಿಗೆ||

ಹಟ್ಟಿ ದಿಬ್ಬದಹಳ್ಳಿ ಗಚ್ಚಿನ ಬಾವಿ ನೀರು
ಕೊಬ್ಬರಂಗಕ್ಕೆ ಸೊಳೆಯವ ದಿಬ್ಬದಹಳ್ಳಿ
ಅಪ್ಪುದ್ದು ಬರುವ ರಾಸಿಗೆ||

ಹಳ್ಳದಾಗ ಹುಲಿಯ ಬಳ್ಳಿಲಿಕರೆದೈದು
ತಳ್ಳಿನ ಕಿವಿಮುರಿದು|
ತಳ್ಳಿನ ಕಿವಿಮುರಿದು |ಚನ್ನಣ್ಣ
ಹಳ್ಳಿ ಹೋಗದು ಕಾಳಿವಾಯಿ

ಬೆಟ್ಟದಗ ಹುಲಿಯ ಬಟ್ಟಿಲಿ ಕರೆದು
ಬೆಟ್ಟನ್ನ ಕಿವಿಯ ವಡೆಮುರಿದು
ಬೆಟ್ಟನ್ನ ಕಿವಿಯ ವಡೆಮುರಿದು |ಚನ್ನಣ್ಣ|
ಹುರುಡಿಹಳ್ಳಿ ಬೆಟ್ಟಕ್ಕೆ ಹೋಗು ಎಂದು ಕಳಿವನಾ||

ತಗ್ಗಿ ತಗ್ಗಿನಲ್ಲಿ ಬಗ್ಗಿ ದಗ್ಗಡುವಾರೇರು|
ಗಗ್ಗರಿಯ ಕಾಲು ಹುಲಿರಾಜ|
ಗಗ್ಗರಿ ಕಾಲು ಹುಲಿರಾಜ |ಚನ್ನಣ|
ಹುರಡಿಹಳ್ಳಿ ಗುಡ್ಡಕೂಗು ಎಂದು ಕಳವಾರು||

ಚಿಕ್ಕನ ಮಕ್ಕಳು ಪಟ್ಟದಾರು|
ಸತ್ಯ ಪಾಲಕನೇ ನೆಡೆಮುಂದೆ||
ಸತ್ಯ ಪಾಲಕನೇ ನಡೆಮುಂದೆ |ಬಸವನ|
ಬೆನ್ನು ಸಪ್ಪರಿಸಿ ನಡೆದನ||

ಹೆಣ್ಣು ಮಕ್ಕಳು ಬಾರಿ ಅವಸರದವರು|
ಹೆಣ್ಣ ಪಾಲಕರು ನಡೆಮುಂದೆ||
ಹೆಣ್ಣ ಪಾಲಕರು ನಡೆಮುಂದೆ |ಬಸವನ|
ಬೆನ್ನು ಸಪ್ಪರಿಸಿ ನಡೆದನು||

ಎತ್ತುನ್ನು ಬರಲಿಲ್ಲ | ಎತ್ತಿನ ಕಿಲಾರಿ ಬರಲಿಲ್ಲ|
ಚಿಕ್ಕ ಶಿವಗಂಗೆ ಬಯಲಗ|
ಚಿಕ್ಕ ಶಿವಗಂಗೆ ಬಯಲಗಾ ||ಯರ‍್ರಣ್ಣ||
ಗೌಡರಪ್ಪಣೆ ತರಲೋದ||

ಎತ್ತು ಕಾಯಣ್ಣ ಪಟ್ಟದಟ್ಟಿ ಪಾಪಣ್ಣ|
ಎತ್ತು ಕಾಯರು ಮುಗುಚಾಣ||
ಎತ್ತು ಕಾಯರು ಮುಗಚಾಣ ||ಪಾಪಣ್ಣ||
ಎತ್ತಿನ ಹಿಂದೆ ನೊಡೆದರು||

ಆಕಳು ಕಾಯರು ನೀಲಹಟ್ಟಿ ಪಾಪಣ್ಣ|
ಆಕಳು ಕಾಯರ ಮುಗಚಾಣ||
ಆಕಳು ಕಾಯರ ಮುಗಚಾಣ |ಪಾಪಣ್ಣ|
ಆಕಳೆದಿಂದೆ ನೇಡದನೆ||

ನೀರು ಕುಡಿದ ಎತ್ತು ನಿಡುಗಲ್ಲಿಗೆ ಹತ್ತಿದವು|
ಯಾರ ಕುಗಿದರು ಬರಲಿಲ್ಲ |ಚನ್ನಣ್ಣ|
ತೋರಿಸು ನಿನ್ನ ಧ್ವನಿಯನ್ನು|

ಹಾವು (ಅಕಳ) ಕಾಯಣ್ಣ ಹಾಲಿನ ಲಿವಣ್ಣ ಕೊಟ್ಟ|
ದೇವಾಕ ಸುರಿಗೆ ಗುಲಿಗಂಜೆ||
ಕೊಟ್ಟ ದೇವಂಕ ಸುರಿಗೆ ಗಲುಗಂಜಿ |ಗುಡ್ಡವರೆ|
ಅಕಳ್ನಚನ್ನಣ ಕರೆದನು||

ಎತ್ತ ಕಾಯಣ ತಪ್ಪದ ಹಾಲಿವಣ್ಣ ಕೊಟ್ಟು|
ದುಪ್ಪಕ್ಕ ಸುರಿದು ಗುಲುಗಂಜೆ||
ದುಪ್ಪಕ್ಕ ಸುರಿದು ಗಲುಗಂಜೆ | ಗುಡ್ಡವರೆ
ಎತ್ತುನ ಪಾಪಣ್ಣ ಪರಿಪನೆ||

ಬಾಲದಲ್ಲಿ ಬಲವಂತ | ಕಾಲಿವಲಿ ಕರೆ ಚಲುವ|
ಕುಂಬಿಲ್ಲಿ ಗಂಬೀರ; ಮೂಗನಲಿ ಮುಕ್ಕಣ್ಣ||
ಬಟ್ಟಣ್ಣನೆಂಬ ಎತ್ತು ಬಂದವಯ್ಯ||

ಸ್ವಾಮಿ ಬರುತನಂದು ಸಾಗಿಬೀದಿಗೆ ಬಂದೆ|
ಸ್ವಾಮಿ ನನ್ನ ಕೈಗೆ ಸಿಗಲಿಲ್ಲ|
ಸ್ವಾಮಿ ನನ ಕೈಗೆ ಸಿಗಲಿಲ್ಲ |ಹುರಡಿಹಳ್ಳಿ|
ಸೆವಂತೆ ತೋಪುಲಿ ಮರೆಯಾದ

ರುದ್ರಬರುತನೆಂದು ಎದ್ದು ಬೀದಿಗೆ ಬಂದೆ|
ರುದ್ರ ನಮಕೈಗೆ ಸಿಗಲಿಲ್ಲ|
ರುದ್ರನಮಕೈಗೆ ಸಿಗಲಿಲ್ಲ |ಹುರುಡಿಹಳ್ಳಿ|
ರುದ್ರಾಕ್ಷಿ ತೋಪುಲಿ ಮರೆಯಾಯಿತು||

ಎನಿಯಕ್ಕ | ನೆನಗಡಲಿ ಗೂನಿ ಮುರಿದ ಬಾಳೇಹಣ್ಣು|
ಸೀಗಳಿ ತಮುಟ | ಬತ್ತಿ ಉದಿನ ಕಡ್ಡಿ|
ಸೀಗಳೆ ತಮುಟ ಇಬತ್ತಿ ಉದಿನಕಡ್ಡಿ |ಚನ್ನಣ್ಣಗೆ|
ತಾಯಿ ಕಂಚವ್ವ ಕಳವಳೇ|
ಒಂದಲೇ |ಬಂದಡಿಕೆ| ಬಂದೇ ಬೆಲ್ಲದ ಹಚ್ಚು|
ಬಂದಳೇ ಗಂಗಮ್ಮ ನಮ ಸಹಜಗೆ|

ನಿಂಬೆಹಣ್ಣಿನಂಗ ತುಂಬಿರುವ ಗಂಗಮ್ಮ|
ಹಿಂಬು ಕೂಡು ನನ್ನ ಗುರುವಿಗೆ|
ಹಿಂಬುಕೂಡು ನನ್ನ ಗುರುವಿಗೆ |ಚನ್ನಣ್ಣ|
ಬಂಗಾರದ ಗುಡಿ ತೊಳೆಯಕೆ||

ಬಾಳೇ ಹಣ್ಣಿನಂಗ ಬಾಗಿರುವ ಗಂಗಮ್ಮ|
ಬಾಜುಬೇಡು ನಮ್ಮ ಗುರುವಿಗೆ||
ಬಾಜುಬೇಡು ನಮ್ಮ ಗುರುವಿಗೆ |ಚನ್ನಣ್ಣ|
ಬಂಗಾರದ ಲಿಂಗ ತೊಳೆಯಕೆ||

ಹರಿಯುವ ನೀರಿಗೆ ಹಲಿಗಲಿ ಆರುತಿ ತೆಗೆದು|
ಅರವತ್ತು ಬಿಲ್ಲು ಹೆಗಲಿಟ್ಟ
ಅರವತ್ತು ಬಿಲ್ಲು ಹೆಗಲಿಟ್ಟ |ಹುರುಡಿಹಳ್ಳಿ|
ಹಳದಗೆ ಅಗರೇ ಹಗಲಲ್ಲ|

ನಿಂತು ನೀರಿನಗ ಹಂಚಿಲಿ ಆರತಿ ತೆಗದು|
ಪಂಚಾರೀತಿ ಬಿಲ್ಲು ಹೆಗಲಿಟ್ಟು|
ಪಂಚಾರೀತಿ ಬಿಲ್ಲು ಹೆಗಲಿಟ್ಟ |ಹುರುಹಳ್ಳಿ|
ಹಲಚಿಲಾಡನೇ ಹಗಲಿಲ್ಲ|

ಮಡಿಗೇನು ಇರುವರು ಮಡಿವಳ ಅಂಬುತ್ತಿದ್ದೆ|
ಮಡಿವನಲ್ಲ ಮಡಿಸ್ವಾಮಿ|
ಮಡಿವನಲ್ಲ ಮಡಿಸ್ವಾಮಿ |ಚನ್ನಣ್ಣ
ಮಾಡಿತ್ತಿದ್ದನು ||ಜೆಪಿಗಾಣ||

ಕಟ್ಟಗ್ಯ ಇರುವನು ಶೆಟ್ಟಿಯ ಒತ್ತಿದ್ದ|
ಶೆಟ್ಟಿಲ್ಲಮ್ಮ ಶಿವಶರಣ|
ಶೆಟ್ಟಿಲ್ಲಮ್ಮ ಶಿವಶರಣ |ಚನ್ನಪ್ಪ
ಕಟ್ಟುವಸತ್ತಿರ್ಯಾಜೋಡಿಗಾರ||

ಆವರೇ ಹೂವಿನಂಗ ಆರವತ್ತು ಹಚ್ಚಾಡ|
ಹೇಳಿದಾಗ ಚನ್ನಣ್ಣ ಬರುತ್ತನ|
ಹೇಳದಾಗ ಚನ್ನಣ್ಣ ಬರುತ್ತನ |ಗೌಡರ
ಕೊಂಡಗದ ಕಡ್ಲು ಪನಿವರ||

ಹತ್ತಿಹೊನಂಗೆ ಇಪತ್ತು ಹಚ್ಕೋಡ|
ಹಟ್ಟಿಗೆ ಚನ್ನಣ್ಣ ಬರುತ್ತನೆ
ಹಟ್ಟಿಗೆ ಚನ್ನಣ್ಣ ಬರುತ್ತನೆ |ಭಕ್ತರ|
ನಾಗಳೆದ ಕಡ್ಲುಪನೀವರ||

ಹಳ್ಳಿದ ಹರಿಗಲಿ ಮಾರಗದ ಹಂಚಲಿ|
ಉರುಮೆಯ ಶಬ್ದ ನುಡಿದವಾ|
ಉರುಮೆಯ ಶಬ್ದ ನುಡಿದವಾ |ಚನ್ನಪ್ಪ|
ಮಜ್ಜಣದ ಕಳೆಗೆ ಬರುವಾನ|

ಹಳ್ಳ ಏರುವಾಗ ಇನ್ನೊರು ತಡದರೂ
ಹೋಗೂಳಿಗಾರ ತಡೆದನ| ಮಾಡಿದರ
ಗಂಗಿ ಅಚ್ಚಡು ತೊರವು
ಗಂಗಿ ಅಚ್ಚಡ ತೋರವು |ಬಸಣ್ಣ|
ತೋಗಿ ನಿವಳೇ ತೆಡೆಯನು|

ಗುಡ್ಡೆಯ್ಯೊರುವಾಗ ಇನ್ನೂರು ತಡೆದರು
ಹೋಗೊಳಿದರೂ ತಡೆದನು
ಹೋಗಳಿದರೂ ತಡೆದನು ||ಮಡಿವಣ||
ಅಚ್ಚಡ ಮುಂಡಸ ತೆರೆಯ್ಯೊದು||
ಅಚ್ಚಡ ಮುಂಡಸ ತೆರೆಯ್ಯೊದು |ತಿಪ್ಪಣ್ಣ|
ಗೊಕ್ಕನ ನೀವೆಳೆ ಕಾಡಿದರು|

ಬಾರೇ ಮರಡೇಯಲ್ಲಿ ಬಾಗೇಡವರಾರು
ಕಾಯಿಹೊಂಬಳೆ ಮುಡಿಕೊಂಡು|
ಕಾಯಿಹೊಂಬಳೆ ಮುಡಿಕೊಂಡು |ಪಾಪಣ್ಣ|
ಕಾಳಕ್ಕೆ ಬೆಟ್ಟನ ಸಲಗಿತ್ತು

ನುಗ್ಗಿಯ ಮರದಡಿಯಲ್ಲಿ
ಬಗ್ಗಿ ಬರುವರ್‍ಯಾರು|
ಮಗ್ಗೆ ಹೊಂಬಳಿ ಮುಡುಕೊಂಡು
ಮಗ್ಗೆ ಹೊಂಬಳೆ ಮುಡುಕೊಂಡು |ಲೆಗ್ಗೆಗೆ
ಬಿಟ್ಟನು ಸಲಿಗಿತ್ತು|

ಎದ್ದು ಬಾ ಚನ್ನಣ್ಣ ಹೆಜ್ಜೆಯು ನೋಡನು
ಹೆಜ್ಜೆ ಹೆಜ್ಜೆಗೆ ಚನ್ನ ಬೀಗಸರೂ|
ಹೆಜ್ಜೆ ಹೆಜ್ಜೆಗೆ ಚನ್ನ ಬೀಗಸರೂ |ದಿಬ್ಬದಹಳ್ಳಿ|
ಗೌಡರ ಎಂಥ ಧನಕರ

ನಡೆದು ಬಾ ಚನ್ನಣ್ಣ ನಡುಗಿಯನು ನೋಡೆನು
ನುಡು ನಡು ಚಿನ್ನ ಬಿಗಿಸರೂ|
ನಡು ನಡು ಚಿನ್ನ ಬಿಗಿಸರೂ |ತಿಮ್ಮನಹಳ್ಳಿ|
ಹರಳಯೆನ ಭಕ್ತರು|

ಸುತ್ತು ತುಗ್ಗಲಿಲ್ಯಾಗ ಹತ್ತಿಬರುವವರ್‍ಯಾರು
ಸುಕ್ಕೆ ಮುಣಿಗಿದರು ಬರಲಿಲ್ಲ|
ಸುಕ್ಕೆ ಮುಣಿಗಿದರು ಬರಲಿಲ್ಲ ||ಚನ್ನಣ್ಣ||
ಅವರಮ್ಮ ಹೊಟ್ಟೆ ಹೊರಿಯಂದು ಅಳುತ್ತಾಳೆ
ದೂರದ ಬೆಟ್ಟದಲ್ಲಿ ತೋರಿ ಬರುವರ್‍ಯಾರು|
ಸೂರ್ಯ ಮುಳಗಿದರು ಬರಲಿಲ್ಲ|
ಸೂರ್ಯ ಮುಳಗಿದರು ಬರಲಿಲ್ಲ |ಚನ್ನಣ್ಣ|
ಅವರಮ್ಮ (ಮೂರ್ಚೆ) ಮರ್‍ಯಾಹೊಯಲ್ಲಿ ಅಳುತ್ತಾಳೆ

ಹಾಲದ ಕಾಯಿರಂಗ ತೊಳುತುಂಬ ಹೆಜ್ಜೆ|
ವಾಲುಗದ ನಡುವೆ ಬರುವನು||
ವಾಲುಗದ ನಡುವೆ ಬರುವನು |ಚನ್ನಪ್ಪ|
ಒಕ್ಕಲಿಗರತ ಧನಕರರು|

ಹತ್ತಿಯ ಕಾಯಂಗ ರಟ್ಟೆ ತುಂಬ ಗೆಜ್ಜೆ|
ಒಕ್ಕಲು ನಡುವೆ ಬರುವನು|
ಒಕ್ಕಲು ನಡವೆ ಬರುವನು |ಚನ್ನಪ್ಪನ|
ಗೌಡರೆನಂಥ ಧನಕರು

ಹತ್ತಿ ಹೂವಿನಂತೆ ಇಪ್ಪತ್ತು ಅಚ್ಚಡ|
ತಿಮ್ಮನಹಳ್ಳಿ ನಡುವೆ ಬರುವನ|
ತಿಮ್ಮನಹಳ್ಳಿ ನಡುವೆ ಬರುವನ |ಚನ್ನಪ್ಪನಿಗೆ|
ಮಲ್ಲಿಗೆ ಹೊವ್ವೆಯಿರಿ ಎದುರಿಗೆ

ಹತ್ತು ಸುತ್ತಿನ ಕೋಟೆ ಹತ್ತಿ ಬಂದಯ್ಯ
ಛತ್ರಿಕೆ ವೈಯಿರಿ ಎದುರಿಗೆ ಬದುರಿಗೆ
ಛತ್ರಿಕೆ ವೈಯಿರಿ ಎದುರಿಗೆ |ಎಕ್ಕೆಗೊಂದಿ|
ಹಕ್ಕಿ ಬಂದಂತೆ ಒಡೆಯಾಗೆ

ಆರು ಸುತ್ತಿನ ಕೋಟೆ ಆಹರಿ ಬಂದಯ್ಯಗಳ|
ಆರಿತಿ ವೈಯಿರಿ ಎದುರಿಗೆ|
ಆರುತಿ ವೈಯಿರಿ ಎದುರಿಗೆ |ದಿಬ್ಬದಹಳ್ಳಿ|
ಆರಿಬಂಥವೆ ಒಡೆಯರಿಗೆ||

ಕೆಂಡಗಳು ತಲೆಯು ಗುಂಡುಗಳು ಮಳೆಗೆಲ್ಲ|
ಕೆಂಡ ದಿಬ್ಬದಹಳ್ಳಿ ಬೈಲಗ||
ಕೆಂಡ ದಿಬ್ಬದಹಳ್ಳಿ ಬೈಲಗ |ಚನ್ನಪ್ಪ|
ಕೆಂಡಕ್ಕೆ ಮುಖವಾಗಿ ಹೋದವನು||

ಮುತ್ತು ಮುತ್ತು ಎಂದು ಮುತ್ತಲ್ಲ ಹೊಳೆದವುವು|
ಮುತ್ತೆಲ್ಲ ಬಯಲಾದವು||
ಮುತ್ತೆಲ್ಲ ಬಯಲಾದವು |ಚನ್ನಪ್ಪ|
ಮುತ್ತಗಿ ಜನಕ್ಕೆ ಹೋಳಿದನು

ಕೆಂದುತ್ತು ಬರುವಾಗ ಬಂದಿಲ್ಲಿ ನಾನೆದ್ದೆ|
ಕೆಂಡದ ಆರುತಿ ಹಿಡಿದಿದ್ದೆ||
ಕೆಂಡದ ಆರತಿ ಹಿಡಿದಿದ್ದೆ |ಚನ್ನಣ್ಣ|
ಕೆಂದತ್ತು ಪೌಳಿಗೆ ಹೋಗವಾಗ|

ಹಾವಿನ ಗೂಡಿಗೆ ಪಹುಡುಗ ತೆರೆ ಹೊಯಿದು
ಬಾಲಮ್ಮಗಾಲು ಸಾಲುವಳು|
ಬಾಲಮ್ಮಗಾಲು ಸಾಲುವಳು |ಕಾಮಪ್ಪ|
ಹಾವಿನ ಕೀಲಾರಿ ಹೆಸರೇಳು|
ಹಾವಿನ ಕೀಲಾರಿ ಹೆಸರೇನು |ನಾನೇನು ಹೇಳಲು|
ಹಾರಾಳು ತಂದು ಸೋಸಿನಾನು

ಸಾದತ್ತು ಬರುವಾಗ ಸ್ವಾಮಿ ಸಾಲಿಗೆ ಇದ್ದ
ಸಾದೆತ್ತು ಪೌಳಿಗೆ ಹೋಗುವಾಗ|
ಸಾದೆತ್ತು ಪೌಳಿಗೆ ಹೋಗವಾಗ ||ಚನ್ನಪ್ಪ||
ದೋಪಾದರುತಿ ಬೆಳಗನ||

ಸ್ವಾಮಿಯ ಗುಡಿಮುಂದೆ ಬಹಳ ಗದ್ದಲು |ಬಂದೇ|
ಸ್ವಾಮಿ ಚನ್ನಣ್ಣ ನಿಧಿ ಮುಂದೆ|
ಸ್ವಾಮಿ ಚನ್ನಣ್ಣ ನಿಧಿ ಮುಂದೆ|
ಕೆಂದುತ್ತಿಗೆ ಒಬ್ಬತ್ತಿಗೆ ಗಗ್ಗರಿ ಹಾಕ್ಯಾರು |ಗೌಡರ||

ಅಪ್ಪಾನ ನಿಧಿ ಮುಂದೆ ಬಹಳ ಗದ್ದಲು |ಬಂದೇ|
ಅಪ್ಪ ಚನ್ನಣ್ಣನ ನಿಧಿ ಮುಂದೆ|
ಅಪ್ಪ ಚನ್ನಣ್ಣನ ನಿಧಿ ಮುಂದೆ||
ಬಟ್ಟತ್ತಿಗೆ ಮುದ್ದುರೆ ಹೊತ್ತರು ಬಸವಣ್ಣ||

ಕೆಂಡದ ಮುದ್ದುರೆ ಹೊಂದಿಸಿ ಕೊಟ್ಟವರ್‍ಯಾರು|
ಗಂಜ್ಯರುಮಾಲದ ಹಿರಿಯರು|
ಗಂಜ್ಯರುಮಾಲದ ಹಿರಿಯರು |ತಿಮ್ಮನಹಳ್ಳಿ|
ಕೂಡಿಕೊಂಡು ಎತ್ತಿಗೆ ಬುದ್ದಿ ಕಲಿಸರು||

ಮುದ್ದುರೆ ವತ್ತಿದ ಎತ್ತು ಮರೇ |ಒಡೆರೆಂದು|
ಬುದ್ಧಿಮಂತ್ರು ಮಗಳ ಕರಿಸಿರಿ|
ಬುದ್ಧಿಮಂತ್ರು ಮಗಳ ಕರಿಸಿರಿ|
ಚನ್ನಮ್ಮ ಹಾಲು ತರಿಸಳಾ ಬಸವಣಾ||

ಎಲ್ಲಿ ನೋಡಿದರು ಹುಲ್ಲಿನ| ಗೂಡಿಸಲು
ಎಲ್ಲಕವರಿಗೆ ಜಗಜ್ಯೋತಿ|
ಎಲ್ಲಕವರಿಗೆ ಜಗಜ್ಯೋತಿ |ಚನ್ನಣ್ಣ|
ಪಟ್ಟದ ಮೆಚ್ಚಕ್ಕೆ ಎದುರಾಗಿ|

ಎತ್ತನೋಡಿದರೂ ಸ್ಪಪ್ಪಿನ ಗೂಡಿಸಲು
ಮುತ್ತಗೌರಿಯ ಜಗಜ್ಯೋತಿ
ಮುಕ್ತಗೌರಿಯ ಜಗಜ್ಯೋತಿ |ಚನ್ನಣ್ಣ|
ತೋಗ ಮಚ್ಚಕ್ಕೆ ಎದುರಾಗಿ||

## ೪.೨. ಗಾದೆಗಳು ಮತ್ತು ಒಗಟುಗಳು

ಗಾದೆಗಳು ತಮ್ಮ ಅಸ್ತಿತ್ವದಲ್ಲಿ ಪರಸ್ಪರ ಆಂತರಿಕ ಸಂಬಂಧವನ್ನು ಹೊಂದಿದವುಗಳಲ್ಲ, ಒಂದು ಗಾದೆ ಇನ್ನೊಂದರಂತೆ ಕಂಡರೂ ಈ ಸಾಮ್ಯವು ಗಾದೆಗಳೆರಡು ತಿಳಿದಿರುವ ಧೋರಣೆಯಾಗಿರುತ್ತದೆ. ಒಂದು ಗಾದೆಯಿಂದ ಇನ್ನೊಂದು ಗಾದೆ ಹುಟ್ಟಿಕೊಳ್ಳಲಾರದು, ಇಲ್ಲವೆ ಒಂದು ಗಾದೆಯ ಹುಟ್ಟಿಗೆ ಇನ್ನೊಂದು ಗಾದೆಯು ಮೂಲಕಾರಣವಾಗಲಿ, ಪ್ರೇರಣೆಯಾಗಲಿ, ಆಗಿರಲಾರದು ಮತ್ತು ಅವುಗಳ ಹುಟ್ಟಿನ ಮೂಲಕೂಡ ಒಂದೇ ಆಗಿರಲು ಸಾಧ್ಯವಿಲ್ಲ. ಒಂದು ಅನುಭವಕ್ಕೆ ಒಂದು ಗಾದೆ ಆದುದರಿಂದ ಗಾದೆಗಳ ಸಂಗ್ರಹವೊಂದು ಜೀವನದ ಅನುಭವಗಳ ಕೋಶವೇ ಆಗಿರುತ್ತದೆ.

ಆರ್ನೆ ಥಾಮ್ಸನ್ನರ ಕಥಾಮಾದರಿ ಸೂಚಿ The Types of the Folklore ಪ್ರತ್ಯೇಕ ಅಸ್ತಿತ್ವ ಹೊಂದಿದ ಕಥೆಗಳನ್ನು ವಿಂಗಡಿಸುವ ಕ್ರಮ ಹೊಂದಿದೆ ಒಂದೊಂದು ಕಥೆಯ ಪ್ರತ್ಯೇಕ ಅಸ್ತಿತ್ವ ಹೊಂದಿದ್ದು, ಅವುಗಳನ್ನು ವ್ಯಾಪಕವಾಗಿ ಒಂದು ಕ್ರಮದಲ್ಲಿ ಇಡುವ ವಿಂಗಡನಾ ಕ್ರಮವನ್ನು ಮಾದರಿಸೂಚಿ ಅನುಸರಿಸಿದೆ. ಅದರಂತೆ ಕಥಾಬೀಜವುಳ್ಳ ಗಾದೆಗಳೂ ಪ್ರತ್ಯೇಕ ಅಸ್ತಿತ್ವ ಹೊಂದಿದವುಗಳಾದ್ದರಿಂದ ಮಾದರಿಸೂಚಿಯ ಕ್ರಮದಲ್ಲಿ ಗಾದೆಗಳನ್ನು ವಿಂಗಡಿಸಿಕೊಳ್ಳಲು ಪ್ರಸ್ತುತ ಗಂಥದಲ್ಲಿ ಪ್ರಯತ್ನಿಸಲಾಗಿದೆ.[೬]

ಜನಪದವು ಪ್ರಾಚೀನ ಹೇಳಿಕೆಗಳಿಗೆ ಸಾಮಾನ್ಯವಾದ ಗಾದೆ ಎಂದು ಕರೆಯುವುದು ವಾಡಿಕೆಯಾಗಿದೆ. ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ನಾಣ್ನುಡಿ' ಎಂಬ ಮತ್ತೊಂದು ಹೆಸರಿದೆ ಮೊದಮೊದಲು ನಾಣ್ನುಡಿ ಎಂಬುದೆ ಪ್ರಚಾರದಲ್ಲಿದ್ದು, ಅನಂತರ ಗಾದೆ ಎಂಬುದು ಬಂದಿರಬೇಕೆಂದು ತೋರುತ್ತದೆ. ಈಗ ಪ್ರಚಲಿತದಲ್ಲಿರುವ 'ಗಾದೆ' ಎಂಬ ಮಾತಿಗೆ ಸಂಸ್ಕೃತ ಪದ 'ಗಾಥಾ' ಎಂಬುದು ಮೂಲವಾಗಿದ್ದು ಕನ್ನಡ ಸಾಹಿತ್ಯಕ್ಕೆ ಜನಜೀವನಕ್ಕೆ ಸಂಸ್ಕೃತ ಮತ್ತು ಪ್ರಾಕೃತಗಳ ಸಾಂಸ್ಕೃತಿಕ ಸಂಬಂಧದಿಂದ ಈ ಪದದ ಆಗಮನವಾಗಿರಬೇಕು. ಹೀಗೆ ಆಗಮನವಾಗುವಾಗ ಗಾದೆ 'ಗಾಥಾ' ಶಬ್ದದ ನೇರ ತದ್ಭವವಾಗಿರಬೇಕು ಗಾದೆ ಸಂವಾದಿಯಾಗಿ ಇನ್ನು ಅನೇಕ ಮಾತುಗಳು ಬಳಕೆಯಾಗಿವೆ. ಅವುಗಳೆಂದರೆ ಲೋಕೋಕ್ತಿ, ಪ್ರಾಚೀನೋಕ್ತಿ, ಸೂಕ್ತಿ, ಸಾಮತಿ ಸೂತ್ರ, ಉದ್ದರಗಿ, ನಿಯಮ, ಪ್ರಾಮಾಣ[೭] ಇತ್ಯಾದಿಯಾಗಿ ಗಾದೆಯನ್ನು ಕರೆಯಲಾಗುತ್ತದೆ. ಗಾದೆ ಸಮಾಜದ ಸಂಸ್ಕೃತಿಯ ಕಸವನ್ನು ಗುಡಿಸುತ್ತದೆ. ಮಕ್ಕಳಲ್ಲಿ ಗಾದೆ ಇರುವುದಿಲ್ಲ. ಅನುಭವಸ್ಥರಲ್ಲಿ ಹಿರಿಯಲ್ಲಿಯೇ ಹೆಚ್ಚು ಗಾದೆ ಮಾತುಗಳು ಇರುತ್ತವೆ. ಗಾದೆಗಳು ಅನುಭವದ ಅಮೃತ. ಗಾದೆ ಸಮಯಕ್ಕೆ ತಕ್ಕಂತೆ ಸಹಜವಾಗಿ ಹೊರ ಹೊಮ್ಮುತ್ತವೆ.

ಸುಭಾಷಿತ, ಹಿತವಚನಗಳಂತೆಯೇ ಘೋಷಣೆಗಳು ಕೂಡ ಗಾದೆಗಳೆಂಬಂತೆ ಭಾಸವಾಗುತ್ತವೆ. ನಾವು ಬಂಡೆಗಳ ಮೇಲೆ ಚಿಗುರೊಡೆಯಬೇಕಾಗಿದೆ. ದಲಿತರ ಬಂದರು ದಾರಿಬಿಡಿ ದಲಿತರ ಕೈಗೆ ರಾಜ್ಯ ಕೊಡಿ, ಸ್ವಾತಂತ್ರ್ಯವೇ ನಮ್ಮ ಜನ್ಮಸಿದ್ಧ ಹಕ್ಕು, ಒಂದು ಬೇಕು ಎರಡು ಸಾಕು, ಆರತಿಗೊಬ್ಬ ಮಗಳು ಕೀರುತಿಗೊಬ್ಬ ಮಗ, ಒಂದು ಎರಡು ಬೇಕು ಮೂರು ಮಕ್ಕಳು ಸಾಕು, ಮನೆಗೊಂದು ಮರು

ಊರಿಗೊಂದು ವನ ಈ ಮುಂತಾದವುಗಳು ಗಾದೆಗಳ ಆಕಾರದಲ್ಲಿವೆ. ಗಾದೆಗಳನೊ ಎನ್ನುವಂತೆ ಭಾಸವಾಗುತ್ತವೆ. ಒದು ನಿರ್ದಿಷ್ಟ ಗುರಿಯನ್ನು ಸಾಧಿಸಲೇಬೇಕೆಂಬ ಹಣ ಪಣ ಘೋಷಣೆಗಳಲ್ಲಿ ಎದ್ದು ಕಾಣುತ್ತದೆ. ಲಾಭಕೋರ ಗುಣಗಳನ್ನು ಹೊಂದಿದ ಇವು ಪ್ರಚಾರಕ್ಕಾಗಿ ಬಳಸುವ ಮಧ್ಯಮಗಳಾಗಿವೆ. ಇವುಗಳ ಅಂತಿಮ ಗುರಿಯ ಪ್ರಚಾರವೇ ಒಂದು ವಿಶಿಷ್ಠ ಉದ್ದೇಶಕ್ಕಾಗಿ ಜನ್ಮ ತಳೆಯುವ ಘೋಷಣೆಗಳು ಉದ್ದೇಶ ಈಡೇರಿದ ಕೂಡಲೇ ಮರೆಯಾಗಿ ಬಿಡುತ್ತವೆ. ಹೀಗಾಗಿ ಇವು ಅಲ್ಪಾಯುಷಿಗಳಾಗಿವೆ.[೮]

ಗಾದೆಯ ಬಗ್ಗೆ ವಿವಿದ ವಿದ್ವಾಂಸರ ಅಭಿಪ್ರಾಯಗಳನ್ನು ನೋಡಬಹುದು.

* ಜೆ.ಉ.ಕೆಲ್ಲೋ:- ಪ್ರಕಾರ ಸಂಕ್ಷಿಪ್ತತೆ, ವಿವೇಕ ಪೂರ್ಣತೆ ಅಥವಾ ಸಂವೇದನಾಶೀಲತೆ, ತೀಕ್ಷ್ಣತೆ ಮತ್ತು ಜನಪ್ರಿಯತೆ ಇವು ಗಾದೆಯ ನಾಲ್ಕು ಗುಣಗಳು.
* ಥಾಮಸ್ ಫುಲ್ಲರ್‌ರವರ ಪ್ರಕಾರ:- ಸರ್ವೇಸಾಮಾನ್ಯವಾದ ಮತ್ತು ಗಮನಾರ್ಹವಾದ ಉಪಯೋಗದಲ್ಲಿನ ಅಡಕವೂ ಸಾರಭೂತವೂ ಆದ ಮಾತು ಅಥವಾ ಹೆಚ್ಚು ವಿಷಯಗಳನ್ನು ಕೆಲವೇ ಮಾತುಗಳಲ್ಲಿ ಭಟ್ಟಿ ಇಳಿಸಿದುದು ಗಾದೆ.
* ಲಾರ್ಡ್‌ಜಾನ್ ರೆಸಲ್:- ಗಾದೆ ಹಲವರ ಜ್ಞಾನ ಒಬ್ಬನ ವಿವೇಕ.
* ಇಸೆಲಿಯನ್ (ಜರ್ಮನ್ ಗಾದೆಗಳ ಸಂಗ್ರಹಕ) ಗಾದೆಗಳೆಂದರೆ ಜನ ಸಾಮಾನ್ಯರಲ್ಲಿ ಚಲವಣೆಯಲ್ಲಿರುವ ಸಾರ್ವಜನಿಕ ಮುದ್ರೆ ಬಿದ್ದಿರುವ ಪ್ರಚಲಿತವೂ ಸ್ವೀಕೃತ ಮೌಲ್ಯರಿತವೂ ಆಗಿರುವ ನಾಣ್ಯ.
* ದ.ರಾ.ಬೇಂದ್ರೆ ಗಾದೆ ಮಾತುಗಳೆಂದರೆ ಅಚ್ಚುಕಟ್ಟಾದ ನಿರ್ಣಯಗಳಲ್ಲಿ ವಿವೇಕ ಜಾಗೃತಿ ಮಾಡುವ ಸುಭಾಷಿತಗಳು.
* ರಾಗೌ:- ಗಾದೆಯೆಂದರೆ ಸದ್ಯೋಜಾತ ನುಡಿಗಟ್ಟು: ಸೂಕ್ತ ಸಂದರ್ಭದಲ್ಲಿ ತಾಳಿದ ಯೋಗ ನಿರ್ಣಯಗಳು[೯]

## ಗಾದೆಯನ್ನು ಕುರಿತ ಗಾದೆಗಳು

| | |
|---|---|
| : ಗಾದೆ ವೇದಕ್ಕೆ ಸಮಾನ | ಕನ್ನಡ |
| : ವೇದ ಸುಳ್ಳಾದರೂ ಗಾದೆ ಸುಳ್ಳಾಗದು | ಕನ್ನಡ |
| : ಗಾದೆ ಸುಳ್ಳಾದಾಗ ಹಾಲೂ ಹುಳಿಯಾದೀತು | ಮಲೆಯಾಳಂ |
| ಗಾದೆ ತಿಳಿದ ವಿವೇಕಿ ಜಗಳ ಬಿಡಿಸುತ್ತಾನೆ | ಆಫ್ರಿಕ |
| : ಗಾದೆಯನ್ನು ಯಾವುದೂ ಮೀರಿಸಲಾರದು | ಐರಿಷ್ |
| : ಗಾದೆ ಜನರ ನಾಣ್ಯ | ರಷ್ಯ |
| : ಊಟದಲ್ಲಿ ಉಪ್ಪಿದ್ದಂತೆ ಮಾತಿನಲ್ಲಿ ಗಾದೆ | ಅರೇಬಿಯ |
| : ಗಾದೆ ಭಾಷೆಗೆ ಭೂಷಣ | ಪರ್ಷಿಯ[೧೦] |

ಗಾದೆಗಳು ತಮ್ಮ ಅಸ್ತಿತ್ವವನ್ನು ಪರಸ್ಪರ ಆಂತರಿಕ ಸಂಬಂಧವನ್ನು ಹೊಂದಿದವುಗಳಲ್ಲ, ಒಂದೇ ವಿಂಗಡಣಾ ಕ್ರಮದಲ್ಲಿ ಒಳಪಡುವ ಗುಣಗಳನ್ನು ಜನಪದ ಕಥೆ ಮತ್ತು ಗಾದೆಗಳು ಹೊಂದಿರುವುದರಿಂದ ಈ ಎರಡು ಸಮಾನಾಂಶಗಳಲ್ಲಿ ಸಂಬಂಧವುಳ್ಳ ಜಾನಪದ ಸ್ಪವೆನಿಸುತ್ತದೆ. ಗಾದೆಗಳು ಮಾನವನ ವೈಚಾರಿಕ ಭಾವನಾತ್ಮಕ ನೆಲೆಯಲ್ಲಿ ರೂಪಗೊಂಡು ಜೀವನಾನುಭವದ ಗಟ್ಟಿಗಳು, ಒಂದೊಂದು ಗಾದೆಯೂ ಒಂದೊಂದು ವಿಶಿಷ್ಟ ಅನುಭವದ ಹಿನ್ನೆಲೆಯನ್ನು ಪಡೆದಿರುತ್ತದೆ. ಅಂದರೆ ಪ್ರತಿಯೊಂದು ತನ್ನ ಮಡಿಲಲ್ಲಿ ಕಥಾ ಬೀಜವನ್ನು ಬಿತ್ತದ "ಪ್ರತ್ಯಕ್ಷ ಕಂಡೂ ಪ್ರಾಮಾಣಿಸಿ ನೋಡಿ" ಎಂಬ ಗಾದೆಯನ್ನು ಒಂದು ಕಥೆ ತನ್ನ ದೈಯೆವಾಕ್ಯವಾಗಿ ಸ್ವೀಕರಿಸಿದ್ದರೆ. ಪ್ರತಿಯಾಗಿ ಅನೇಕ ನಿದರ್ಶನಗಳು, ಈ ಗಾದೆಯ ಹಿಂದೆ ಬಿತ್ತರಿಸುವ ಉದಾಹರಣೆಯೊಂದನ್ನು ನೋಡಬಹುದಾಗಿದೆ. ಅರಸನ ಶಯ್ಯಾಗಾರವನ್ನು ಕಾಯುತ್ತಿರುವ ಸಹೋದರ ಮತ್ತು ಹಾವು ಎಂಬ ಕಥೆಯಲ್ಲಿ ರಾಜನು ಮನೆಯಲ್ಲಿ ಸರ್ಪ ಕಚ್ಚಿಸಾಯುವನು ಎಂದು ಹಕ್ಕಿಗಳ ಭವಿಷ್ಯ ಕೇಳಿದ ಪ್ರಧಾನಿಯು ಅರಸನನ್ನು ಉಳಿಸಲು ಆತ ಮಲಗುವ ಕೋಣೆಯಲ್ಲಿ ಎಚ್ಚರವಾಗಿ ಕಾಯತ್ತ ಕುಳಿತನು ರಾತ್ರಿ ಕಚ್ಚಲು ಬಂದ ಹಾವನ್ನು ಕತ್ತರಿಸಿದನು. ಆದರೆ ಹಾವಿನ ವಿಷದ ಒಂದು ಹನಿ ಅರಸನ ಹೆಂಡತಿಯ ಎದೆಯ ಮೇಲೆ ಬಿದ್ದಿತು. ಅದನ್ನು ನಾಲಿಗೆಯಿಂದ ತೆಗೆಯಲು ಹೋದಾಗ ರಾಣಿಗೆ ಎಚ್ಚರವಾಗಿ ತನಗೆ ಕೆಡಿಸಲು ಬಂದನೆಂದು ಅಪವಾದ ಹೊರಿಸಿದಳು. ರಾಜನು ಪ್ರಧಾನಿಗೆ ಮರಣ ದಂಡನೆ ವಿಧಿಸಿದನು[೨೦] ಹೀಗೆ ಈ ಕಥೆಯ ಘಟನೆಯ 'ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣಿಸಿ ನೋಡು' ಎಂಬ ಗಾದೆಯನ್ನು ಹುಟ್ಟುಹಾಕುತ್ತದೆ.

ಈ ರೂಪದಲ್ಲಿ ಕಂಡು ಬಂದ ಗಾದೆಗಳು ಕಥಾ ಬೀಜಗಳನ್ನು ತಮ್ಮ ಬದಲು ಹುದುಗಿಸಿಟ್ಟುಕೊಂಡಂತೆ ಕಥೆಗಳು ಗಾದೆಗಳನ್ನು ತಮ್ಮ ಧ್ಯೆರ್ಯ ವ್ಯಾಕ್ಯಗಳಾಗಿ ಸ್ವೀಕರಿಸುವುದನ್ನು ಕಾಣುತ್ತೇವೆ. ಅದರಲ್ಲೂ ಪ್ರಾಣಿ ಕಥಾ ಸಂಕಲನಗಳಾದ ಇಸೋಪನ ನೀತಿ ಕತೆಗಳು ಪಂಚತಂತ್ರದ ಕಥೆಗಳು, ಪ್ರಾಣಿಗಳ ಮೂಲಕ ಕಥೆಗಳನ್ನು ಹಣೆದು ಗಾದೆಗಳು ಮುಖಾಂತರ ಅವುಗಳ ಧ್ಯೇಯವನ್ನು ಸಾರುತ್ತವೆ. ಗಾದೆಗಳು ಹಲವಾರು ಅನುಭವಗಳ ವ್ಯಷ್ಟೆಸ್ಯಷ್ಟಗಳಾದರೂ ಸಮಸ್ಯೆ ಪ್ರಜ್ಞೆಯುಳ್ಳವುಗಳು ಅದಕ್ಕಾಗಿ ಗಾದೆಗಳು ಹಲವಾರು ಸೊತ್ತು ಎನ್ನಿಸುತ್ತದೆ. ಇದು ಶ್ರೀ ಸಾಮಾನ್ಯನ ನಾಲಿಗೆಯ ಮೇಲೆ ಹರಿದಾಡುತ್ತಿರುತ್ತದೆ.

ಪ್ರತಿಯೊಂದು ನಾಡಿನ ಜನತೆಯ ಹಿಂದಿನ ಸ್ವಪ್ನಗಳನ್ನು ನೆನಪುಗಳನ್ನು ಮಾತುಕಥೆ ನಡುವಳಿಕೆಯಲ್ಲಿ ಪರಂಪರೆಯಿಂದ ಅನೇಕ ಸಂಗತಿಗಳನ್ನು ಹೊತ್ತು ತರುತ್ತವೆ. ಅವು ಪಾರಂಪರಿಕವಾಗಿಯೂ ಮುಂದುವರೆಯಬಹುದು. ಇಂತಹ ನೆನಪುಗಳನ್ನು ಆಚಾರ, ವಿಚಾರ, ಪದ್ಧತಿ, ಸಾಹಿತ್ಯ ಬಗೆಗಳು ಮತ್ತು ಕ್ರೀಡೆ, ಕಲೆ, ನೃತ್ಯ, ನಾಟಕ, ಉಡುಗೆ, ತೊಡುಗೆ, ಮನೋರಂಜನೆ ಮಾಧ್ಯಮಗಳು ಧಾರ್ಮಿಕ ಕ್ರಿಯೆಗಳು ಜೀವನ ವಿಧಾನ ಮುಂತಾದವುಗಳ ಮೂಲಕ ನಾವು ಅವುಗಳನ್ನು ಮೆಲಕು ಹಾಕಿಸುತ್ತವೆ. ಇವುಗಳನ್ನು ಪೂರ್ಣವಾಗಿ ಬಳಸಿಕೊಳ್ಳುವ ಚೌಕಟ್ಟನ್ನು ಜಾನಪದ ಎನ್ನುವ ವಿಶಾಲ ಅರ್ಥದಲ್ಲಿ ಕರೆಯುತ್ತಾರೆ. ಅದರಲ್ಲಿ ಜನಪದ ಸಾಹಿತ್ಯವು ಗೀತೆ, ಲಾವಣಿ, ಕಾವ್ಯ, ಕಥೆ, ಗಾದೆ, ಒಗಟು, ಇತ್ಯಾದಿಗಳನ್ನು ಒಳಗೊಂಡ ಜಾನಪದ ಒಂದು ಸಣ್ಣ ಅಂಗ ಮಾತ್ರವಾಗದೆ.

ನಾಡಿನ ಸಾಂಸ್ಕೃತಿಕ ಚರಿತ್ರೆಯ ಹೊಸ ನಿರ್ಮಾಣಕ್ಕೆ ಕೇವಲ ಅಗತ್ಯವಾದ ಅಂಶಗಳನ್ನು ನಾವು ವಿಶೇಷವಾ ನೋಡಬಹುದಾಗಿದೆ. ಇಲ್ಲಿ ಮುಖ್ಯವಾದ ಕೆಲವು ಅಂಶಗಳಾದ ಕಥೆ, ಗಾದೆ, ಪುರಾಣ, ಹೀಗೆ ಹಲವು ಅಂಶಗಳನ್ನ ನೋಡಬಹುದು. "ಅಡು ಮುಟ್ಟದ ಗಿಡವಿಲ್ಲ ಗಾದೆ ಹೇಳದ ವಿಷಯವಿಲ್ಲ" ಎಂದು ತೋರುತ್ತದೆ. ಇಲ್ಲಿಯವರೆಗೆ ಗಾದೆ ಬಳಸಿಕೊಂಡು ವಿಷಯ ವ್ಯಾಪ್ತಿಯನ್ನು ಗಮನಿಸಲಾಯಿತು. ಇದರಿಂದ ಗಾದೆಗಳನ್ನು ಕೇವಲ ಮಾನವ ನಾಗರಿಕತೆಯ ಪಳೆಯುಳಿಕೆಗಳು ಮಾತ್ರ ಎಂದು ನಾವು ಭಾವಿಸುವಂತಿಲ್ಲ ಎಂಬ ಮಾತನ್ನು ನೆನಪಿನಲ್ಲಿಡಬೇಕು. ಪ್ರಸ್ತುತ ಜೀವನವನ್ನು ಮಾನವ ಸ್ವಭಾವಗಳನ್ನು ಅರ್ಥೈಸಲು ಪ್ರತಿ ಬಿಂಬಿಸಲು, ಧ್ವನಿಸಲು ಗತಕಾಲದ ಸಂಗತಿಗಳನ್ನು ಸಹಕಾರಿಗಳನ್ನಾಗಿ ಗಾದೆಗಳು ಬಳಸಿಕೊಂಡಿರುವುದು, ಸ್ಪಷ್ಟವಿದೆ. ಗಾದೆಗಳು ಜೀವನಾನುಭವಗಳೆಂಬ ತಿಳಿನೀರುನಿಂದ ತುಂಬಿದ ಹೊಂಡಗಳಿದ್ದಂತೆ ಅವುಗಳಲ್ಲಿ ಕಾಣುವುದು ನಮ್ಮ ನಿಮ್ಮ ಪ್ರತಿಬಿಂಬಗಳೇ ಇದು ಗಾದೆಗಳ ಬಹುದೊಡ್ಡ ಸಾಹಿತ್ಯಿಕ ಗುಣ. ಈ ಗುಣಗಳಿಂದ ಗಾದೆಗಳನ್ನು ಹೊರತು ಪಡಿಸಲು ಸಾಧ್ಯವೇ ಇಲ್ಲ. ಗಾದೆಗಳು ಗಂಡುಹೆಣ್ಣುಗಳ ಒಂದೊಂದು ಜಾತಿ ಜನಾಂಗದ ಉದ್ಯೋಗಸ್ತರ ಸಹಜ ಸ್ವಭಾವಗಳನ್ನು ಎತ್ತಿ ತೋರಿಸುತ್ತವೆ. ಹೀಗೆ ತೋರಿಸುವಾಗ ಅವು ಸುಮ್ಮನ ಅವರ ಸ್ವಭಾವಗಳನ್ನು ದಾಖಲಿಸವೆ. ಅದಕ್ಕಾಗಿ ಗಾದೆಗಳು ಹೇಳುವವನಿಗೆ ರುಚಿ ಒದಗುವುದು, ಅಘಾತ, ನೋವು ಗಾದೆ ಒಳ್ಳಯದರ ಗುಣವನ್ನು ಹೊಗಳುವುದಕ್ಕಿಂತ ಕೆಟ್ಟುದರ ದೋಷವನ್ನು ಎತ್ತಿ ಹೇಳುವುದೇ ಹೆಚ್ಚು ಅವು ದೊಷದ ಎದುರಿಸಿ ಹಿಡಿದು ರಾವುಗನ್ನಡಿಗಳಂತೆ ಗಾದೆಗಳು ನೀತಿಯ ಮಾತುಗಳು ನಿಜ. ಆದರೆ ಮೈದಡವಿ, ಮುದುಮಾಡಿ ಹೇಳದ ರಿಂಗಮಾಸ್ತರನಂತೆ ಚಾಟಿ ಏಟು ಕೊಟ್ಟು ಹೇಳುತ್ತವೆ. ವಿರೋಧ ತಿರಸ್ಕಾರ, ನಿಷೇಧ, ಅಪಹಾಸ್ಯ, ಅನ್ಯೋಕ್ತಿ ಕೊಂಕುಗಳು, ಗಾದೆಗಳ ಅಸ್ತ್ರಗಳು "ಇದ್ದುದನ್ನು ಇದ್ದಂತೆ ಹೇಳಿ ಎದ್ದು ಬಂದ ಎದೆಯ ಮೇಲೆ ಬಿದ್ದಂತೆ" ಮಾಡುವ ಗುಣ ಗಾದೆಯದು[೨]

### ೧. ಕುಲಕ್ಕೊಂದು ಜಾತ್ರೆ ಜನಕ್ಕೊಂದು ಬುದ್ಧಿ

ಈ ಗಾದೆಯು ಅಕ್ಷರ ಸಹ ಸತ್ಯವಾಗಿದೆ. ಏಕೆಂದರೆ ಒಂದು ಊರಿನಲ್ಲಿ ಜಾತ್ರೆ ನಡೆಯುತ್ತದೆ ಎಂದರೆ ಆ ಊರಿನ ಪ್ರಬಲ ಸಮುದಾಯದವರೇ ಆ ಜಾತ್ರೆಯನ್ನು ಮಾಡುತ್ತಾರೆ. ಪ್ರತಿಯೊಂದು ಕುಲದವರು ಒಂದೊಂದು ಜಾತ್ರೆಯನ್ನು ಮಾಡುತ್ತಾರೆ. ಹಾಗೆಯೇ ಆ ಜಾತ್ರೆಗೆ ಬಂದಂತಹ ಜನರ ಬುದ್ಧಿಯು ಸಹ ನಾನಾ ರೀತಿಯದ್ದಾಗಿರುತ್ತದೆ. ಎಲ್ಲರ ಬುದ್ಧಿ ಒಂದೇಯಾಗಿರುವುದು ಅಸಾಧ್ಯ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ನಮ್ಮ ಹಿರಿಯರು 'ಕುಲಕ್ಕೊಂದು ಜಾತ್ರೆಯಾದರೆ ಜನಕ್ಕೊಂದು ಬುದ್ಧಿ' ಎಂಬ ಗಾಥೆಯನ್ನು ವ್ಯಕ್ತಪಡಿಸಿದ್ದಾರೆ.

### ೨. ಜಾತ್ರೆಯು ಮುಗಿಯಿತು ದೋತ್ರವು ಹರಿಯಿತು

ಈ ಗಾದೆಯ ಆರ್ಥಿಕತೆಯನ್ನು ಸೂಚಿಸುವಂತಹ ಗಾದೆಯಾಗಿದೆ ಇಲ್ಲಿ ಜಾತ್ರೆ ಎಂದ ಕೂಡಲೇ ಜನರ ನೆನಪಿಗೆ ಬರುವುದು ಹಣ. ಈ ಹಣದ ಹೂಡಿಕೆಗಾಗಿ ಹಗಲುರಾತ್ರಿ ಬೆವರು ಸುರಿಸಿ ಸಂಪಾದನೆ

ಮಾಡಿ ಕೊನೆಯಲ್ಲಿ ಸಾಲವನ್ನಾದರು ಮಾಡಿ ಜಾತ್ರೆಗಳನ್ನು ಮಾಡುತ್ತಾ. ಅಂದು ಎರಡು ಮೂರು ದಿನಗಳ ಕಾಲ ಸಂತೋಷವಾಗಿ ಜಾತ್ರಾಉತ್ಸವವನ್ನು ಮುಗಿಸಿಕೊಂಡು ಹಿಂದಿರುಗಿದಾಗ, ಸಾಲದ, ಬಾದೆ ಮನೆಯಲ್ಲಿ ದೈನಂದಿನ ವಸ್ತುಗಳ ಕೊರತೆ. ಆಗ ಅವನಿಗೆ ದೋತ್ರ ಹರಿದಂತೆಯಾಗುತ್ತದೆ. ಅಂತಹ ಸಂದರ್ಭದಲ್ಲಿ ಗಾದೆಗಳನ್ನು ಹೇಳುವಂತದ್ದು.

**೩. ಜಂಬಮಾಡಿ ಜಾತ್ರೆಗೆ ಹೋದರೆ ಕೂಸಿನ ಕೈಯಲ್ಲಿ ಕಾಸಿನ ಕಡಲೆಲ್ಲ**

ಪುರುಷರು ಜಾತ್ರೆ ಎಂದಾಕ್ಷಣ ಜಾತ್ರೆ ಮಾಡಲು ಹೋಗುವುದಿಲ್ಲ ಅಲ್ಲಿ ಬೇರೆ ರೀತಿಯ ಗುರಿಯೆನ್ನಿಟ್ಟುಕೊಂಡು ಕೈಯಲ್ಲಿ ಸ್ವಲ್ಪ ಹಣವಿದ್ದರೂ ಸಹ ಜಂಬ ಮಾಡಿಕೊಂಡು ನಾನು ಜಾತ್ರೆಗೆ ಹೋಗುತ್ತೇನೆ ಎಂದು ಎಲ್ಲರ ಮುಂದೆ ಹೇಳಿಕೊಳ್ಳುತ್ತಾರೆ. ಆದರೆ ಜಾತ್ರೆಯಲ್ಲಿ ಅಲ್ಪಸ್ವಲ್ಪವಿರುವ ಹಣವನ್ನೆಲ್ಲಾ ಖರ್ಚುಮಾಡಿಕೊಂಡು ಮಜಾಮಾಡ ಮನೆಗೆ ಬರುವ ಸಂದರ್ಭದಲ್ಲಿ ಕೂಸಿನ ಕೈಯಲ್ಲಿ ಒಂದು ಕಾಸಿನ ಕಡ್ಲೆರುವುದಿಲ್ಲ.

**೪. ಹಬ್ಬ ಊಟಕ್ಕೆ ಚಂದ ಜಾತ್ರೆ ನೋಟಕ್ಕೆ ಚಂದ**

ಈ ಗಾದೆಯು ಬಹಳ ಅರ್ಥಪೂರ್ಣವಾದಂತದ್ದು ಹಿರಿಯರು ಹೇಳಿದ ಮಾತಿನಂತೆ ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ನಾಣ್ಣುಡಿಯಂತೆ ಈ ಗಾದೆಗಳು ಮಹತ್ವವಾದವು. ಕಾಲಾವಧಿಯೇ ಬರುವಂತಹ ಹಬ್ಬಗಳು ಊಟಕ್ಕೆ ಚಂದವಾಗಿರುತ್ತದೆ. ಏಕೆಂದರೆ ಅಲ್ಲಿ ನೋಡುವಂತಹ ವಸ್ತುಗಳು ಜನಪದ ಕಲೆಗಳು ಅಷ್ಟೊಂದು ಇರುವುದಿಲ್ಲ. ಇದ್ದರೂ ಅವು ವಿಶೇಷವಾಗಿ ಕಾಣಲಾರವು ಆದರೆ ಊಟಕ್ಕೆ ಮಾತ್ರ ಹಬ್ಬದ ದಿನದಂದು ದೈನಂದಿನ ಊಟಕ್ಕಿಂತ ಭಿನ್ನವಾಗಿರುವುದರಿಂದ ಅಂದು ಬಹಳ ತೃಪ್ತಿಯಾಗುವತನಕ ಊಟ ಮಾಡುತ್ತಾರೆ. ಅದೇ ರೀತಿ ಜಾತ್ರೆ ನೋಟಕ್ಕೆ ಮಾತ್ರ ಚಂದವಾಗಿರುತ್ತದೆ. ಅಲ್ಲಿ ಸಾವಿರಾರು ಜನಸಂಖ್ಯೆಯ್ಯ ಪರಿಚಿತರು ಅಪರಿಚಿತರೂ ಗಂಡ ಹೆಣ್ಣು ಚಿಕ್ಕವರು, ದೊಡ್ಡವರು, ಎಂಬ ಬೇದ ಭಾವ ಇಲ್ಲದೆ ಎಲ್ಲರೂ ಒಂದೆಡೆ ಸೇರುವುದರಿಂದ ಅದೇ ನೋಡುವುದಕ್ಕೆ ಮಾತ್ರ ಚಂದವಾಗಿರುತ್ತದೆ. ಅಲ್ಲಿ ತಿಂಡಿ ತಿನಿಸುಗಳನ್ನು ತಿಂದರೆ ರೋಗವನ್ನು ಹಣ ಕೊಟ್ಟುಕೊಂಡಂತೆ ಎಂಬ ನಂಬಿಕೆಯಿಂದ ತಿನ್ನುವುದು ಕಡಿಮೆ.

**೫. ಹೋಳಿಗೆ ಇಲ್ಲದ ಹಬ್ಬವಿಲ್ಲ, ರಥ ಇಲ್ಲದ ಜಾತ್ರೆ ಇಲ್ಲ**

ಗ್ರಾಮೀಣ ಮಟ್ಟದಲ್ಲಿ ಜನರು ಹಬ್ಬ ಮಾಡಿದರೆ ಊಟಕ್ಕೆ ಹೋಳಿಗೆ ಮೊದಲ ಸ್ಥಾನದಲ್ಲಿರುತ್ತದೆ. ಪ್ರತಿಯೊಬ್ಬರ ಮನೆಯಲ್ಲಿಯೂ ಹೋಳಿಗೆ ಮಾಡಿರುತ್ತಾರೆ. ಈ ಜನಪದರು ದೇವರ ನೈವೇದ್ಯಕ್ಕೆ ಹೋಳಿಗೆಯೇ ಅಗ್ರಸ್ಥಾನದಂತೆ ಕಾಣುತ್ತದೆ. ಅಡುಗೆಯಲ್ಲಿ ಉತ್ತಮವಾದ ಅಡುಗೆ ಎಂದರೆ ಹೋಳಿಗೆ ಅದರಂತೆ ಜಾತ್ರೆಯಲ್ಲಿ ಮುಖ್ಯವಾಗಿ ರಥ ಇಲ್ಲದ ಜಾತ್ರೆಯೇ ಇಲ್ಲ. ಯಾಕೆಂದರೆ ತೇರು ಎಳೆಯುವ ಸಂದರ್ಭ ಜನಪದರಿಗೆ ವಿವಿಧ ದೃಷ್ಟಿಕೋನದಿಂದ ಶ್ರೇಷ್ಠವಾದುದು ರಥವಿಲ್ಲದೇ ಜಾತ್ರೆ ಜಾತ್ರೆಯೇ ಅಲ್ಲ ಸತ್ಯವಾಗಿಯೂ ನಿಜವಾದುದು. ಈ ಗಾದೆಯೇ ಶ್ರೇಷ್ಠತೆಯನ್ನು ಎತ್ತಿ ತೋರಿಸುವಂತಹ ಗಾದೆ ಮಾತಾಗಿದ, ಈ ನಮ್ಮ ಜನಸಾಮಾನ್ಯರು ಅವಿದ್ಯಾವಂತರಾದರೂ ಬುದ್ಧಿಯಲ್ಲಿ ಚಾಣಾಕ್ಷರಾಗುತ್ತಾರೆ.

ಗಿಡಾ ಇದ್ದಾಗ ಬಗ್ಸದ್ದು ಮರ ಇದ್ದಾಗ ಬಗ್ಗದೇ,

ಜಾಲಿ ಬಿತ್ತಿ ಕಾಲಿಗೆ ಮೂಲ,

ಹುಣಸಿ ಮರ ಮುಪ್ಪಾದ್ರೆ ಹುಳಿ ಮುಪ್ಪೆ?,

ಮನೆ ಮುಂದೆ ಬಾರಿಮರ ಇರಬಾರದು. ಚಿಲ್ಲರೆ ವ್ಯಾಪಾರ ಮಾಡಬಾರದು,

ಪುರಾಣ ಹೇಳೊಕಾಯ್ತು ಬದ್ನಿಕಾಯಿ ತಿನ್ನಕಾಯ್ತು,

ಒಣಗಿದ ಎಲೆಗೆ ಗೊತ್ತು ಹಸರಲೇ ಹಣಿಬಾರ,

ಆಕಳ ಹೊಟ್ಟೆಗಾ ಅಚ್ಚೇರು ಬಂಗಾರ,

ನೆಚ್ಚಿದ ಎಮ್ಮೆ ಕೋಣನ ಈಯಿತು,

ಎತ್ತು ಎರೆಗೆಳೆಯಿತ್ತು ಕೋಣ ಕೆರೆಗೆಳೆಯಿತ್ತು,

ಅಡಿಕೆಗೆ ಹೋದ ಮಾನ ಆನೆ ಕೊಟ್ರು ತೀರಾದು,

ಕೋಳಿನ ಕೇಳಿ ಕಾರ ಹಾರಿದಂಗ,

ಕಷ್ಟ ಬಂದಾಗ ಕತ್ತೆ ಕಾಲು ಹಿಡಿಬೇಕು,

ನಾಯಿ ಬಾಲ ಡೊಂಕು ನ್ಯಾಯ ಹೇಳ್ವನ ಮನ ಡೊಂಕು,

ಕೋಳಿ ಕರಿದಾದ್ರ ತತ್ತಿ ಕರಿದಲ್ಲ,

ನಕ್ಕಾರ ಮಧುವಿ ಚಂದ, ಆತ್ರ ಹೆಣ ಚಂದ,

ಕೂದಲ ಸುಟ್ರು ಬೂದಿ ಆಗಾಲ್ಲ,

ಮಾತು ಬಂದಾಗ ಸೋತು ಹೋದವ್ನೇ ಜಾಣ,

ಹೊಟ್ಟೆ ತುಂಬಿದ್ರ ಹುಗ್ಗಿ ಮುಳ್ಳ ಮುಳ್ಳ,

ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ,

ಮಗ ಉಂಡ್ರ ಕೇಡಲ್ಲ ಮಳೆ ಬಂದ್ರ ಕೇಡಲ್ಲ,

ಗಂಡ ಮಾಡಿದ ಪಾಪ ಹೊಸ್ತಲ ಹರಗೆ ನಿಲ್ತಾದ,

ಹೆಣ್ತಿ ಮಾಡಿದ ಪಾಪ ಮನಿ ಒಳಗ ಬರ್ತಾದ,

ಹೆಂಗಸರ ಬಾಯಗೆ ಮಾತೆ ನಿಂದ್ರಾಂಗಿಲ್ಲ,

ಗಂಡಸರ ಬಗಲಾದ ಕೂಸ ನಿಂದ್ರಾಂಗಿಲ್ಲ,

ನೂರು ರುಮಾಲ ಒಟ್ಟಾಗಿ ಸೇರಬಹುದು,

ಮೂರು ತುರುಬ (ಜೆಡೆ) ಒಟ್ಟಾಗ ಕೂಡಲ್ಲ,

ಗಂಡಸ್ಸು ಕುಂತು ಕೆಟ್ಟ, ಹೆಂಗಸ್ಸು ತಿರುಗಿ ಕೆಟ್ಲು,

ಶೀಲಾವಂತರ ಮನೆಯಲ್ಲಿ ಕೋಳಿ ಮಾಯವಾಯಿತಂತೆ,

ಕುಲಹನ್ನೆರಡು ಜಾತಿ ಉಡೋ ಸೀರೆ ಒಂದು,

ಬ್ರಾಹ್ಮಣರ ನೇಗಲ ಬೆಣ್ಣೆ ಬೇಡಿತಂತ್ತೆ,

ಭಟ್ಟ ಮಾಡಿದ್ದು ತುತ್ತು ಹೊಟ್ಟೆಗಂತ,

ಪೋತರಾಜನ ಕಣ್ಣ ಹೋತಿನ ಮ್ಯಾಗ,

ಅಲ್ಪನಿಗೆ ಐಶ್ವರ್ಯ ಬಂದ್ರ ಅರ್ಧರಾತ್ರಿಗ ಕೊಡಿ ಹಿಡಿಸ್ಗೊಂಡ,

ತುರುಕರ ಸಾವಹಸ ರಾತ್ರಿಕೆ ಉಪವಾಸ,

ಹಾಲಕ್ಕೆ ಹೂವಿಲ್ಲ, ಸಾಲಕ್ಕ ಕೊನೆ ಇಲ್ಲ,

ಅಗಸನ ಸಿಟ್ಟು ಅನ್ಯರ ಬಟ್ಟೆಯ ಮೇಲೆ,

ಜೀಪುಣಗಳಿಸಿದ್ದನ್ನು ಜಾಣ ಉಂಡ,

ಗಂಡ ಸತ್ತ ಮೇಲೆ ಹೆಂಡ್ರು ಬುದ್ಧಿವಂತೆ,

ಕಿಡಿ ಸಣ್ಣದಾದ್ರೂ ಕಾಡು ಸುಡಬಲ್ಲು,

ಮನೆಗೆ ಮಾರಿ ಪರರಿಗೆ ಉಪಕಾರಿ,

ಅನ್ನ ಇಕ್ಕಿ ಸಾಕು ಅನ್ನಿಸಬಹುದು. ಹಣ ಕೊಟ್ಟು ಸಾಕು ಅನ್ನಿಸುಕಾಗಲ್ಲ,

ನಾಟಿ ಹಾಕಿದ ಹೊಲ ಚೆಂದ, ಮೇಟಿ ನೆಟ್ಟ ಕಣ ಚಂದ,

ಉಬ್ಬೆ ಮಳೆಗೆ, ಗುಬ್ಬಿ ಪುಚ್ಚನೆನೆಯಲ್ಲ

ರೋಣೀ ಮಳೆಗೆ ಓಣೆಲ್ಲ ಜೋಳ.

ಹಿರಿಯ ಮಗನಾಗಬೇಡ, ಬಾಗಿಲು ಕದವಾಗಬೇಡ,

ಗಂಗಗೆ ಭೇದವಿಲ್ಲ, ಲಿಂಗಕ್ಕೆ ಹೊಲೆಯಿಲ್ಲ,

### ೪. ಒಗಟುಗಳು

ಒಗಟು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಸಾಹಿತ್ಯ ಪ್ರಕಾರವಾಗಿದೆ. ಇದು ವಿಶ್ವವ್ಯಾಪಕವಾದುದು ಕ್ರಿಸ್ತಪೂರ್ವ ಕಾಲಕ್ಕೂ ಹಿಂದಿಯೇ ಗ್ರೀಕರಿಗೆ ಒಗಟು ತಿಳಿದಿತ್ತು. ಪ್ರಾಚೀನ ಗೀಕರು ವಧುವನ್ನು ಗೆಲ್ಲಲು ಒಗಟುಗಳನ್ನು ಬಳಸುತ್ತಿದ್ದರು. ಮಧ್ಯಯುಗದಲ್ಲಿ ಗ್ರೀಕ್ ಒಗಟುಗಳು, ಲ್ಯಾಟಿನ್ ಮತ್ತು ಫ್ರೆಂಚ್ ಪಾರಾಂತರಗಳು ಪ್ರಚಾರದಲ್ಲಿದ್ದುವೆಂದು ಸಿ.ಎಫ್.ಪಾಟರ್ ತಿಳಿದ್ದಾರೆ. ಈಡಿಪಸ್ ನಾಟಕ್ ಸ್ಫಿಂಕ್ಸ್ ಒಡವು ಪ್ರಸಿದ್ಧವಾಗಿದೆ. ಪುರಾತನಾ ಒಗಟುಗಳೇ ಗಾಂಭೀರ್ಯ, ಗಹನವಾದ ಪ್ರಕೃತಿ ರಹಸ್ಯ, ಅಸ್ಪಷ್ಟ ಭಾಷೆ, ಚಮತ್ಕಾರ ಕಂಡುಬರುತ್ತದೆ. ತತ್ವಜ್ಞಾನಿಗಳು, ಭಾಷಾಶಾಸ್ತ್ರಜ್ಞರಿಗೆ ಮನಶಾಸ್ತ್ರಜ್ಞರಿಗೆ ಕಾವ್ಯಾಸಕ್ತರಿಗೆ ಒಗಟು ಇಷ್ಟ[೧೯]

ಭಾರತದಲ್ಲಿ ಒಗಟಿಗೆ ವೇದಕಾಲದ ಹಿಂದಿನ ಇತಿಹಾಸವಿದೆ. ಭಾರತದ ಒಗಟುಗಳಲ್ಲಿ ವೈವಿಧ್ಯತೆ ಹೆಚ್ಚು ಭಾರತದ ಎಲ್ಲಾ ಒಗಟುಗಳಿಗೆ ವೈದಿಕ ಒಗಟುಗಳು ಮೂಲವಾಗಿವೆ. ಪಾಣಿನಿಯ

ಅಷ್ಟಾಧ್ಯಾಯಿಯಲ್ಲಿ ಪ್ರಶ್ನೋತ್ತರ ಒಗಟಿದೆ. ವೈದಿಕ ಸಾಹಿತ್ಯದಲ್ಲಿ ಅಪ್ಪಗೋಪ್ಯದ ಒಗಟಿನ ರೀತಿಯ ಹಾಡುಗಳಿವೆ.[೨೩]

ಕನ್ನಡದಲ್ಲಿ ಶಿವಶರಣರ ವಚನದಲ್ಲಿ ಒಗಟಿನ ಲಕ್ಷಣಗಳು ಇವೆ. ಹಂತಿ ಹಂಪನ ಸಮಸ್ಯೆಗಳು ಮತ್ತು ಹರಿಹರನ ಮುಡಿಗೆ ಅಷ್ಟಕಗಳಲ್ಲಿಒಗಟಿನ ಅಂಶವುಂಟೆ, ಕನಕದಾಸರ ಜೀವನ ವೃತ್ತಾಂತಗಳಲ್ಲಿ ಮುಡಿಗೆ ಅಷ್ಟಕಗಳಲ್ಲಿ ಒಗಟಿನ ವಿಷಯಗಳಿವೆ. ಹಾಗೆ ನೋಡಿದರೆ ಒಗಟು ಬುದ್ಧಿವಂತಿಕೆಯ ರಚನೆ. ಮನುಷ್ಯ ಸುತ್ತು ಬಳಸಿ, ರಹಸ್ಯಾರ್ಥವಿಟ್ಟು ಮಾತಾಡುವುದು ಸಾಮಾನ್ಯ, ದೇವರ ಗುಡ್ಡ ಭಕ್ತರ ಸಂವಾದ ದೇವರ ವರ, ಹೂವು, ಕೇಳುವ ಧಾರ್ಮಿಕ ಕ್ರಿಯೆ ಕಣಿ ಕೇಳುವುದು ಕುರುಕುರುಮಾಮನ ಶಾಸ್ತ್ರ ಕವಡೆಶಾಸ್ತ್ರ, ಬುಡುಬುಡಕೆಯವನ ಶಕುನ, ಜ್ಯೋತಿಷ್ಯಮೊದಲಾದವುಗಳಲ್ಲಿ ಒಗಟನ್ನು ಜ್ಞಾಪಿಸುವ ಮಾತು, ನಿರೂಪಣೆ ಕಂಡುಬರುತ್ತದೆ. ಶಿಶುನಾಳ ಶರೀಫರಂತಹ ತತ್ವಕಾರರ ತತ್ವಪದಗಳಲ್ಲೂ, ನವ್ಯ ಕಾವ್ಯಗಳಲ್ಲೂ ನವ್ಯ ನಾಟಕಗಳಲ್ಲೂ ಒಗಟಿನ ಅಂಶಗಳನ್ನು ಕಾಣಬಹುದು.[೨೪]

ಒಗಟನ್ನು ಇಂಗ್ಲೀಷ್ ಭಾಷೆಯಲ್ಲಿ Riddle ಎಂದು ಕರೆಯುತ್ತಾರೆ. ಕನ್ನಡದಲ್ಲಿ ಒಗಟು, ಒಡಪು, ಒಂಟು, ಒಡಗತೆ, ವಡಚು, ಕಥೆ ಎಂಬ ಪದಗಳಿವೆ. ಒಗಟಿನ ಗ್ರಾಮ್ಯರೂಪ 'ಒಂಟು' ಬಗೆ ಅಥವಾ 'ಎಸೆ' ಎಂಬ ಅರ್ಥದಲ್ಲಿ ಒಗಟು ಒಡೆ ಒಡೆಸು (ಬಿಡಿಸು) ಎಂಬ ಅರ್ಥದಲ್ಲಿ ಒಡಪು ಬಂದಿರಬೇಕು. ಪ್ರಾಕೃತದ ವಡ್ಡಾಕಹಾ, ಸಂಸ್ಕೃತದ ಬೃಹತ್ಕಥಾ ದಿಂದ ಕನ್ನಡದ ವಡ್ಡಕಥೆ ಅಥವಾ ಒಗಟು ಕಥೆ ಬಳಕೆಗೆ ಬಂದಿದೆ. ಪ್ರಾಚೀನ ಕಾವ್ಯಗಳಲ್ಲಿ ಒಗಟಿಗೆ ಸಂವಾದಿಯಾಗಿ ಮುಂಡಿಗೆ, ಮುಡಿಗೆ ಶಬ್ದಗಳಿವೆ.

**ಅರಿಸ್ಟಾಟಲ್:-** ಒಗಟಿಗೂ ರೂಪಕಕ್ಕೂ ನಿಕಟ ಸಂಬಂಧವಿದೆ. ರೂಪಕಗಳ ಸರಣಿಯೇ ಒಗಟು

**ಸಿ.ಎಫ್.ಪಾಟರ್:-** ಒಗಟು ಒಡತನಕ್ಕೆ ಅಸಮಧಾನವನ್ನು ಶ್ರೀಮಂತಿಕೆಗೆ ವಿರೋಧವನ್ನು ವ್ಯಕ್ತಪಡಿಸುವ ಕ್ಷೇಮಕಾರಿ ವಾಹಕ.

ಶ್ರೀ ಮರುಕುಂಟ್ಲೇಶ್ವರ ದೈವದ ಗ್ರಾಮಗಳಲ್ಲಿ ಒಗಟುಗಳಿಗೆ ನಿರ್ದಿಷ್ಟ ಸಾಮಾಜಿಕ ಹಿನ್ನೆಲೆಯೇನೂ ಇಲ್ಲ, ಆದರೆ ಹೊಲ, ಮನೆಯ ಸಾಮಾನ್ಯ ಕೆಲಸಗಳ ನಡುವೆ ಮತ್ತು ಜಾತ್ರೆಯ ಸಂದರ್ಭದಲ್ಲಿ ಸಂಬಂಧಿಕರು ಅಥವಾ ನೆಂಟರ ಜೊತೆ ಒಗಟುಗಳು ಜಿದ್ದಾಜಿದ್ದಿಯಾಗಿ ಬೀಳುತ್ತದೆ. ಹೀಗೆ ಮಾತಿಗೆ ಮಾತು ಬಂದಾಗ ಕೆಲವೊಮ್ಮೆ ಖುಷಿಯಾಗಿ. ಕೆಲವೊಮ್ಮೆ ತನ್ನ ಜಾಣತನದ ಪ್ರದರ್ಶನಕ್ಕಾಗಿಯೇ ಒಗಟುಗಳನ್ನು ಒಪ್ಪುವುದುಂಟು ಗಾದೆಗಳನ್ನು ಹೇಳಲು ಒಂದು ವಯಸ್ಸಿನ ಅನುಭವದ ಅರ್ಹತೆ ಬೇಕಾಗಿದ್ದರಿಂದಲೇ ಮಕ್ಕಳು ಗಾದೆಯನ್ನು ಹೇಳುವುದಿಲ್ಲ. ಕೆಲವೊಮ್ಮೆ ಇರುವ ಹೋಲಿಕೆಗಳನ್ನು ನುಡಿಗಟ್ಟುಗಳನ್ನು ತಮ್ಮ ಮಾತುಗಳಲ್ಲಿ ಬಳಸುವುದುಂಟಾದರೂ ದೊಡ್ಡವರ ನುಡಿಗಳಷ್ಟು ಅವು ವೈವಿಧ್ಯಮಯವಾಗಿರುವುದಿಲ್ಲ, ಮಗು ಚೆನ್ನಾಗಿ ಮಾತನಾಡಲು ಕಲಿಯುತ್ತಿದ್ದಂತೆ ಮೊದಲು ಪುಟ್ಟ ಪುಟ್ಟ ಪದ, ಕಥೆಗಳನ್ನು ಹೇಳಿ ಕೊಟ್ಟಿದ್ದನ್ನು ಹೇಳಲು ಪ್ರಯತ್ನಿಸಿ ತದ ನಂತರ ಮುಂದೆ ತನ್ನ ಸಾಮಾನ್ಯ ಅನುಭವಕ್ಕೆ ಗ್ರಾಹ್ಯವಾಗುವ ಒಗಟುಗಳನ್ನು ಹೇಳುವ, ಬಿಡಿಸುವ ಪ್ರಯತ್ನಕ್ಕೆ ತೊಡಗುತ್ತದೆ. ಒಗಟು

ಕ್ರಿಯೆ ಯಶಸ್ವಿಯಾಗಬೇಕಾದರೆ ಇದರಲ್ಲಿ ಕನಿಷ್ಠ ಇಬ್ಬರು ಪಾಲ್ಗೊಂಡಿರಬೇಕು, ಒಬ್ಬ ಒಗಟು ಹೇಳುವನು ಇನ್ನೊಬ್ಬ ಉತ್ತರ ಕೊಡುವವನು, ಕೇಳುಗರಿದ್ದರೆ ಈ ಕ್ರಿಯೆ ಹೆಚ್ಚು ವೈವಿದ್ಯಮಯವಾಗಿ ಬಹುಕಾಲ ನಡೆಯಲು ಸಾಧ್ಯವಾಗುತ್ತದೆ. ಒಗಟು ಹಾಕುವುದನ್ನು ಒಡ್ಡುಗೆ, ಒಡಸುಗ, ಹಾಗೂ ಕೇಳುಗ ಈ ಮೂವರ ಯಾವ ಯಾವ ಸ್ಥಾನದಲ್ಲಿದ್ದಾರೆ ಅದೇ ಸ್ಥಾನವು ಅವರಿಗೆ ಖಾಯಂವಾದುದಲ್ಲ. ಅವರು ತಮಗೆ ಇಷ್ಟವಾದುದರಲ್ಲಿ ಭಾಗವಹಿಸಬಹುದು. ಪರಸ್ಪರ ಮುಖಾಮುಖಿಯಾಗುವುದು ಒಗಟಿನ ಮುಖ್ಯ ಲಕ್ಷಣವಾದ್ದರಿಂದ ಈ ವರ್ತನೆ ಆನಿವಾರ್ಯಗುತ್ತದೆ. ಈ ಒಗಟುಗಳ ನಿರ್ಮಾಣದ ಹಿಂದೆ ಮಾನವನ ಆಲೋಚನೆ ಮತ್ತು ಅಭಿವ್ಯಕ್ತಿಗಳ ಮಾತ್ರವಲ್ಲ ಅವನ ಭಾವನೆಗಳು ರೂಪಿಸುವ ಸಮಾನ ಲಯದ ಭಾವ ಮಾದರಿಗಳ ಬಗ್ಗೆಯೂ ನಾವು ಚಿಂತರಾಗಬೇಕಾಗುತ್ತದೆ. ಕಥೆಗಳು ಮಾನವನ ಜೀವನದ ನಾಗರೀಕತೆಯ ಪಳೆಯುಳಿಕೆಗಳೆಂದು ಹೇಳುತ್ತೇವೆ. ಗಾದೆಗಳು ಮಾನವನ ಅನುಭವಗಳ ಸಾರ್ವತ್ರಿಕತೆಯನ್ನು ಸಾರಿದರೆ, ಒಗಟುಗಳು ಅವನ ಬೌದ್ಧಿಕ ಜಾಣ್ಮೆಯ ಸಮಾನತೆಯನ್ನು ಸಾರಿ ಹೇಳುತ್ತವೆ.

### ಶಬ್ದ ಮತ್ತು ಅರ್ಥ

ಒಗಟು ಶಬ್ದದ ರೂಪನಿಷ್ಪತ್ತಿಯ ವಿಷಯದಲ್ಲಿ ಅದರ ಸಮಾಸ್ಯಾತ್ಮಕ ಗುಣವೇ ವಿದ್ವಾಂಸರಲ್ಲಿ ತಲೆದೋರಿದೆ. ಒಗಟು ದ್ರಾವಿಡ ಬಳುವಳಿಯಲ್ಲಿ ಸಂಸ್ಕೃತ ಇಲ್ಲವೇ ಪ್ರಾಕೃತದಿಂದ ಕನ್ನಡಕ್ಕೆ ಬಂದುದೋ. ಇಲ್ಲವೇ ಈ ವಿಶಿಷ್ಟ ಪದ ಅಚ್ಚಗನ್ನಡದ್ದೊ ಮುಂತಾದ ಹತ್ತು ಹಲವು ವಿಚಾರಗಳ ಸಂಕೀರ್ಣತೆಯಲ್ಲಿ ಆ ಸಮಸ್ಯೆನ್ನು ಸಮಸ್ಯೆಯಾಗಿಯೇ ಉಳಿದಿರುವುದರಿಂದ ಒಮ್ಮತಕ್ಕೆ ಬರುವುದು ಅಸಾಧ್ಯವೆನಿಸಿವೆ. ಒಗಟು ಅತ್ಯಂತ ಪ್ರಾಚೀನವಾದ ಜನಪ್ರಿಯ ಪ್ರಕಾರ. ಅದಕ್ಕೆ ಸಂಸ್ಕೃತದಲ್ಲಿ ಸಂವಾದಿಯಾಗಿ ಬ್ರಹ್ಮೋದ್ಯ ಪ್ರಹೇಲಿಕಾ, ಇಲ್ಲವೇ ಪ್ರವ್ಹಲಿಕಾ, ಪ್ರಶ್ನೆಕೂಟ, ವಿವಾದ, ಸಮಸ್ಯೆ ಗೂಢ, ಹೃದಯಾಲಿಕಾ ಮುಂತಾದ ಪದಗಳಿವೆ. ಇವುಗಳೆಲ್ಲಾ ವೇದಗಳಲ್ಲಿ ಬಳಕೆಯಾದ ಬ್ರಹ್ಮೋದ್ಯವೆ ಹೆಚ್ಚು ಪ್ರಾಚೀನವಾದುದು. ಅಲ್ಲದೇ 'ಅಶ್ವಮೇದಯಾಗ'ದಲ್ಲಿ ಕುದುರೆಯನ್ನು ಕಟ್ಟುವ ಮುನ್ನ ಮೈತ್ರಿ ಮತ್ತು ಬ್ರಾಹ್ಮಣರು ಉಪಾಸನಾ ವಿಧಿಗಳ ಅಂಗವಾಗಿ ಏರ್ಪಡಿಸುತ್ತಿದ್ದ ಸಮಸ್ಯೆ ಪುರಾಣ ಕಾರ್ಯಕ್ರಮವನ್ನೇ ಬ್ರಹ್ಮೋಧ್ಯ ಎಂದು ಕರೆಯುತ್ತಿದ್ದರಂತೆ.

**ಡಾ.ಬೆಟಗೇರಿ ಕೃಷ್ಣಶರ್ಮರು** ಕನ್ನಡದಲ್ಲಿ ಒಗಟು ಪದ ಬಳಕೆಗೊಂಡಿದ್ದನ್ನು ಪರಿಶೀಲಿಸುವಾಗ ಕನ್ನಡ ಓಗಂಟು ಈ ಪದಗಳು ಪಾಕ್ರತದಿಂದಲೇ ಬಂದಿರಬಹುದೆಂದು ಊಹಿಸಿದ್ದಾರೆ. ಕನ್ನಡದಲ್ಲಿ ಒಗಟಿಗೆ ಒಡಗತೆ, ಒಡಚುವಕಥೆ, ಒಪ್ಪಿದ ಕಥೆ ಮುಂತಾದ ಹೆಸರುಗಳಿಂದಲೂ ಕರೆಯುವುದುಂಟು. ತೆಲುಗಿನಲ್ಲಿ ಪೊಡಪು ಕಥಲು ಈ ವಿಚಾರವಾಗಿ "ರಾಗೌ" ಅವರು ಬಡಚುವ ಕಥೆಯೇ ಒಡಗಥೆ ಆಗುವುದು. ಎಷ್ಟು ಸುಲಭವೋ ಬೃಹತ್ಕಥಾದಿಂದ ಒಡಗಡೆ ಅಗುವುದು ಅಷ್ಟೆ ಕಷ್ಟವೆನಿಸುತ್ತದೆ. ಜಾನಪದ ಎಂದರೆ ಜನಪದ ಸಾಹಿತ್ಯ ಜನಪದ ಸಾಹಿತ್ಯವೆಂದರೆ ಕೇವಲ ಗೀತ ಸಾಹಿತ್ಯವೆಂದು ಹೀಗೆ ಭಾವಿಸಲ್ಪಟ್ಟಿತ್ತೂ ಹಾಗೆ ಕರ್ನಾಟಕದಲ್ಲಿ ಇಂದಿಗೂ ಕೂಡಾ ಅದೇ ಭಾವನೆ ದಟ್ಟವಾಗಿದೆ. ಸಿಂಪಿ

ಲಿಂಗಣ್ಣನವರು ಜನಾಂಗದ ಜೀವಾಳ ಎಂಬ ತಮ್ಮ ಗ್ರಂಥವೊಂದರಲ್ಲಿ ಒಡಗಥೆಗಳ ಸ್ವಾರಸ್ಯ ಎಂಬ ಭಾಗದಲ್ಲಿ ಮೊದಲಿನಿಂದ ಕೊನೆಯವರೆಗೂ ಒಗಟು ಎಂದರೆ ಬಡಗತೆ ಎಂದೇ ಸಂಬೋದಿಸಿ ವಿವರಿಸುತ್ತಾ ಹೋಗುವುದನ್ನು ಗುಮನಿಸಬಹುದು. ಒಗಟುಗಳು ಎಂದಾಕ್ಷಣ ಕೆಲವರಿಗಾದರು ಮೊದಲಿಗೆ ನೆನಪು ಇರುವುದು ಅವುಗಳ ಲೈಂಗಿಕಾಭಿವೃದ್ಧಿಯ ಉತ್ಸುಕತೆ ಕಥೆ ಹಾಡು ಗಾದೆ ಹೀಗೆ ಹಲವು ಅಭಿವ್ಯಕ್ತಿ ಪ್ರಕಾರಗಳನ್ನು ಒಳಗೊಂಡಿರುವ ಈ ಕಾಮ ಸಹಜವಾಗಿಯೇ ಒಗಟುಗಳಲ್ಲಿ ಅವತರಿಸಿರುವುದು.

ಉದಾ ಹೆಣ್ಣಿಗೆ ಎರಡು ಗಂಡಿಗೆ ಮೂರು ವಿಭೂತಿ ಬೊಟ್ಟು.

ಹೀಗೆ ಮಾನವ ಬುದ್ಧಿಜೀವಿ, ಬುದ್ಧಿಕೇವಲ ನಾಗರಿಕರ ಅಥವಾ ಪಂಡಿತರ ಚೆಪ್ರೋಡಲ್ಲಿ ಅವರವರ ಬದುಕಿನ ಸಂಸ್ಕಾರ ಮತ್ತು ಪರಿಸರಕ್ಕನುಗುಣವಾಗಿ ಅಸ್ಪಷ್ಟ ಇದ್ದೇ ಇರುತ್ತದೆ.[೧೬]

| | |
|---|---|
| ಅಟ್ಟದ ಮೇಲೆ ಪುಟ್ಟಲಕ್ಷ್ಮಿ | ಕುಂಕುಮ |
| ಉದ್ದನ್ನ ಮರಕ್ಕೆ ಗುದ್ಲು ಸೀಗಿಸರೆ | ಮೂಗುತಿ |
| ಬಳ್ಳಾರಿ ಬಾಳೇದೆಲೆ ಕೂಟ್ಟೂರು ಮುತ್ತಿನ ಚಂಡು | ಜೋಳದ ಗಿಡ ಮತ್ತು ತೆನೆ |
| ಕಾಡಿನಲ್ಲಿ ಕಾಡಮ್ಮ ಜೇಡಿಹಾಕುತ್ತಾಳೆ | ಗೋದಿತೆನೆ |
| ಮನುಷ್ಯನಿಗೆ ಎರಡು ಕಣ್ಣು ನನಗೆ ಮೂರು ಕಣ್ಣು | ತೆಂಗಿನಕಾಯಿ |
| ಗುಡುಗಿಲ್ಲ ಮಿಂಚುಲ್ಲ ಗುಂಡಪ್ಪನ ಕೆರೆಗೆ ನೀರುಬಂದವು | ತೆಂಗಿನಕಾಯಿ |
| ಹಸಿರು ಗಿಡಕ್ಕೆ ಮಸೂರು ಚಲ್ಲೆತೆ | ಮಲ್ಲಗೆ ಹೂ |
| ಹೋಗುವಾಗ ಹೂವಿನ ತೋಟ | ಹತ್ತಿಯ ಹೊಲ |
| ಬರುವಾಗ ಬರೀ ತೋಟ | --"-- |
| ಬೆಳಿಗ್ಗೆ ನಾಲ್ಕು ಕಾಲಿನಲ್ಲಿ  | ಮನುಷ್ಯ |
| ಮಧ್ಯಾಹ್ನ ಎರಡು ಕಾಲಿನಲ್ಲಿ | --"-- |
| ಸಂಜೆ ಮೂರು ಕಾಲಿನಲ್ಲಿ | --"-- |
| ನಡೆಯುವ ಪ್ರಾಣಿ ಯಾವುದು | --"-- |
| ಮಾತುಗೀತು ಯಾವಾಗ | ಬಳೆಗಾರನಿಂದ ತೊಡಸಿಕೊಳ್ಳುವ ಕ್ರಿಯೆ |
| ಎದುರು ಬದುರು ಕೂತಾಗ | --"-- |
| ಅಳಗಿಳ ಯಾವಾಗ | --"-- |
| ಅರ್ಧ ಒಳಕ್ಕೋದಾಗ | --"-- |
| ನಗಾ ನುಡಿ ಯಾವಾಗ | --"-- |
| ಪೂರ್ತಿ ಒಳಕ್ಕೋದಾಗ | --"-- |

| | |
|---|---|
| ಕಲ್ಲರಳಿ ಹೂವಾಗಿ | ಸುಣ್ಣ |
| ಎಲ್ಲರಿಗೂ ಬೇಕಾಗಿ | --"-- |
| ಮಲ್ಲಿಕಾರ್ಜುನನ ಶಿಖರಕ್ಕೆ | --"-- |
| ಬೆಳಕಾಗಿ ನಾನು ಯಾರು....? | --"-- |
| ಅಂಗೈಯೆಷ್ಟು ಗದ್ದೆ | ದೀಪ |
| ಗದ್ದಿಗೆ ನೀರು | --"-- |
| ನೀರಿಗೆ ಬೇರು ಬೇರಿಗೆ ಬೆಂಕಿ ನಾನು ಯಾರು | --"-- |
| ಹಿಡಿದ ಹಿಡಿಯಾಗಲ | ನೀರು |
| ಕಡಿದರೆ ಕಚ್ಚಗಲ | --"-- |
| ಅಪ್ಪಾನು ದುಡ್ಡು ಯಣಿಸಕೇ ಅಗಲ್ಲ | ಚುಕ್ಕಿ, ಅಕಾಶ, ನಕ್ಷತ್ರ |
| ಅಮ್ಮನ ಸೀರೆ ತೊಳೆಯಕ್ಕಾಗಲ್ಲ | --"-- |
| ಅಡ್ಡಗೋಡೆಯ ಮೇಲೆ ಗಿಡ್ಡ ಪೂಜಾರಿ | ದೀಪ |
| ನನ್ನ ವಟ್ಟ ಮ್ಯಾಲೆ ನಿನ್ನವಟ್ಟ | ಬೀಸುವಕಲ್ಲು |

ಕಪ್ಪದ ಗುಡ್ಡದ ಮ್ಯಾಲೆ ಇಪ್ಪತ್ತ ಸೇರು ನವಣೆ ಬಿತ್ತಾರ ಅಳಿಯ್ಯಾಕ ಸೇರು ಇಲ್ಲಿ

| | |
|---|---|
| ಲೆಕ್ಕಮಾಡಕಾ ಒಕ್ಕಲಿಗನು ಇಲ್ಲ. | ಕೂದಲು |
| ಸೂಜಿಯನು ಸಣ್ಣ ಕಾಗಬಣ್ಣ | --"-- |
| ಸುಟ್ಟು ಗುಬ್ಬಿಗೆ ಹೊಚ್ಚ ಹೊಬೇತೆ | ಕರಿಗಡಬು |
| ಚೋಟುದ್ದ ಹುಡುಗಿಗೆ ಮಾರುದ್ದ ಜೆಡಿ | ಸೂಜಿ ಮತ್ತು ದಾರ |

ಒಟ್ಟಾರೆಯಾಗಿ ಮುಂದಿನ ಮಾತಿನಲ್ಲಿ ಉತ್ತರ ಇರುವುದರಿಂದಲೇ ಒಂದು ಉತ್ತರ ಪಡೆದ ಮೇಲೆಯೇ ಅದನ್ನು ಪ್ರಶ್ನೆಯನ್ನಾಗಿ ಪರಿವರ್ತಿಸಿ ಇನ್ನೊಂದು ಒಗಟು ಮಾಡುವುದು. ಮೇಲಿನ ಈ ಎರಡು ವಿಧಗಳಲ್ಲಿ ಮೊದಲ ಭಾಗವನ್ನು ಸರಿಯಾಗಿ ಬಿಡಿಸಿದರೆ ಮಾತ್ರ ಮುಂದಿನ ಒಗಟುಗಳು ಅರ್ಥವಾಗುವುದು ಅಥವಾ ಒಗಟು ಕ್ರಿಯೆ ಮುಂದುವರಿಯುತ್ತದೆ.

# ಅಡಿಟಿಪ್ಪಣಿ

೦೧. ಡಾ.ಮಂಜುನಾಥಬೇವಿನ ಕಟ್ಟಿ, ಕನ್ನಡ ಜನಾಪದ ನಂಬಿಕೆಗಳು, ಪುಟ-೧೦೮, ೧೦೯, ೧೧೦

೦೨. ಡಾ.ಸಿದ್ದಲಿಂಗಯ್ಯ, ಗ್ರಾಮದೇವತೆಗಳು, ಪುಟ-೪೩

೦೩. ಮೇಘನಾಥ ಎ.ಕೆ.ಎನ್, ಮರಿಸ್ವಾಮಿ ಜಾನಪದ ಅಧ್ಯಯನ, ಪುಟ-೨೯,೩೦

೦೪. ಡಾ.ವೀರಣ್ಣ ದಂಡೆ, ಗಾದೆಗಳು ಹಾಗೂ ಒಗಟುಗಳು, ಪುಟ-೧,೨

೦೫. ಪ್ರೊ.ಡಿ.ಲಿಂಗಯ್ಯ, ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಾಪದ ಸ್ವರೂಪ ಮತ್ತು ಸಾಹಿತ್ಯ, ಪುಟ-೫೪

೦೬. ಡಾ.ವೀರಣ್ಣದಂಡೆ, ಗಾಧೆಗಳು ಹಾಗೂ ಒಗಟುಗಳು, ಪುಟ-೪

೦೭. ಅದೇ, ಪುಟ-೭

೦೮. ಪ್ರೊ.ಡಿ.ಲಿಂಗಯ್ಯ, ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸ್ವರೂಪ ಮತ್ತು ಸಾಹಿತ್ಯ, ಪುಟ-೬೭

೦೯. ಅದೇ, ಪುಟ-೭೫

೧೦. ಅದೇ, ಪುಟ-೫೬-೫೭

೧೧. ಮೇಘನಾಥ ಎ.ಕೆ.ಎನ್, ಮರಿಸ್ವಾಮಿ ಜನಪದ ಅಧ್ಯಯನ, ಪುಟ-೪೬

೧೨. ಪ್ರೊ.ಡಿ.ಲಿಂಗಯ್ಯ, ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸ್ವರೂಪ ಮತ್ತು ಸಾಹಿತ್ಯ, ಪುಟ-೬೬

೧೩. ಅದೇ, ಪುಟ-೬೪

೧೪. ಅದೇ, ಪುಟ-೬೫

೧೫. ಅದೇ, ಪುಟ-೬೬

೧೬. ಮೇಘನಾಥ ಎ.ಕೆ.ಎನ್, ಮರಿಸ್ವಾಮಿ ಜನಪದ ಅಧ್ಯಯನ, ಪುಟ-೪೭

* * *

<u>ಅಧ್ಯಾಯ - ಐದು</u>

# ಸಂಪ್ರದಾಯ ಮತ್ತು ಆಚರಣೆಗಳು

ಸಂಪ್ರದಾಯ ಎಂದರೆ ಕಾಲಾನುಕಾಲದಲ್ಲಿ ಬದಲಾಗದೆ ಉಳಿದು ಬಂದ ರೂಢಿ ಎಂದರ್ಥ. ಪದ್ಧತಿ, ರೂಢಿ ಸಂಪ್ರದಾಯ ಇವೆಲ್ಲ ಹೆಚ್ಚು ಕಡಿಮೆ ಒಂದೇ ಅರ್ಥ ಧ್ವನಿಸುವಂತಹ ಪದಗಳು. ಇಂಗ್ಲೀಷ್‌ನಲ್ಲಿ Convention ಎಂಬ ಪದಕ್ಕೆ ಸಂವಾದಿಯಾಗಿ ಸಂಪ್ರದಾಯ ಎಂಬ ಪದವನ್ನು ಬಳಸಬಹುದು. ಯಾವುದೇ ಒಂದು ನಡುವಳಿಕೆ ರೂಢಿಗತವಾಗಿ ಒಂದು ಸಮಾಜದಲ್ಲಿ ಸ್ಥಾಪನೆಯಾದಾಗ ಅದು ಸಂಪ್ರದಾಯವಾಗುತ್ತದೆ.[೧]

ಈ ಸಂಪ್ರದಾಯವು ಕಾಲಕ್ಕೆ ತಕ್ಕ ಹಾಗೆ ಬದಲಾವಣೆ ಹೊಂದಬಹುದು. ಅವಶ್ಯಕತೆಗನುಗುಣವಾಗಿ ಹೊಸ ಹೊಸ ಸಂಪ್ರದಾಯಗಳು ತಲೆಯೆತ್ತಬಹುದು. ಉದಾ:- ಪರಿಚಿತರು ಎದುರಿಗೆ ಸಿಕ್ಕಾಗ ನಮಸ್ಕಾರ ಹೇಳುವುದು ಮೊದಲು ಬಹುತೇಕ ಕಂಡು ಬರುತ್ತಿದ್ದ ಸಂಪ್ರದಾಯ. ಆದರೆ ಈಗ ಅದಕ್ಕೆ ಬದಲಾಗಿ ಹಾಯ್ ಹಲೋ, ಕೈ ಕುಲುಕುವ ಸಂಪ್ರದಾಯ, ಹೆಚ್ಚಾಗಿ ರೂಢಿಯಲ್ಲಿದೆ. ಹೀಗೆ ಕಾಲಕ್ಕೆ ತಕ್ಕಂತೆ ಬದಲಾವಣೆಯಾಗಿವೆ. ಮನೆ ಬಾಗಿಲಿಗೆ ಪ್ಲಾಸ್ಟಿಕ್ ಮಾವಿನ ಎಲೆಗಳ ತೋರಣ ಕಟ್ಟುವುದು, ಸಿಮೆಂಟಿನ ಅಂಗಳದಲ್ಲಿ ಪೇಂಟ್‌ನಿಂದ ಚಿತ್ರ, ರಂಗೋಲಿ ಬರೆಯುವುದು ಮುಂತಾದವುಗಳನ್ನು ಗಮನಿಸಬಹುದು.

"ಮತ ಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವಶಕ್ತಿಗಳ ಪುತ್ಯರ್ಥವಾದ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ ಕರ್ಮವಿದಿಗಳಿಗೆ ಈ ಹೆಸರಿದೆ."[೨] ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ ಸಾಂಪ್ರದಾಯಿಕವಾಗಿ ಒಪ್ಪಿತವಾಗಿರುವ, ಭೂತ, ವರ್ತಮಾನ, ಭವಿಷ್ಯತ್ ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ ಎಂದು ಕರೆಯಬಹುದು.

ಒಂದು ವರ್ಗ ಪರಂಪರಾನುಗತವಾಗಿ ಒಪ್ಪಿರುವ ಮಾನವನ ಕ್ರಿಯಾವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು.

ಸಂಪ್ರದಾಯ ವೈಯಕ್ತಿಕವಾದುದಲ್ಲ ಅದು ಸಾಮೂಹಿಕವಾದದ್ದು. ಜನರು ಏನು ಮಾಡಬೇಕೆಂದು ತಿಳಿಸುವುದೇ ಸಂಪ್ರದಾಯ. ಏಕೆ ಅದನ್ನು ಮಾಡಬೇಕೆಂದು ತಿಳಿದಿದ್ದಾರೋ ಅದೇ ನಂಬಿಕೆ. ಸಮಸ್ಯೆಯ ಹಿತರಕ್ಷಣೆಗಾಗಿ ಸಾಮಾನ್ಯವಾಗಿ ವರ್ಷಕ್ಕೊಂದು ಸಲ, ವಿಶೇಷ ಸಂದರ್ಭಗಳಲ್ಲಿ ಆಚರಿಸುವ ಸಂಪ್ರದಾಯ, ಆಚರಣೆಗಳನ್ನು ಒಳಗೊಂಡ ಸಂಕೀರ್ಣ ಸ್ವರೂಪವನ್ನೇ ಹಬ್ಬ ಎಂದು ಕರೆಯಬಹುದು. ಸಂಪ್ರದಾಯ, ಹಬ್ಬ, ಆಚರಣೆ ಈ ಮೂರಕ್ಕೂ ನಂಬಿಕೆಯೇ ಜೀವಧಾತು."[೫] ಆಚರಣೆಯು ಸಂಪ್ರದಾಯದ ಒಂದು ಭಾಗವಾಗಿ ಕಂಡು ಬರುತ್ತದೆ ಎಂದು ಹೇಳಬಹುದು. ಏಕೆಂದರೆ ಪ್ರತಿಯೊಂದು ಸಂದರ್ಭದಲ್ಲಿ ಯಾವುದೇ ಆಚರಣೆಯ ಮಾಡಬೇಕಾದಲ್ಲಿ ಸಂಪ್ರದಾಯದ ಮೂಲಕ ಕ್ರಮಬದ್ಧವಾಗಿ ಮಾಡುತ್ತಾರೆ. ಮಾನವ ಜನನದಿಂದ ಮರಣದವರೆಗೆ ಅನೇಕ ಆಚರಣೆಯ ವಿಧಾನಗಳನ್ನು ಅನುಸರಿಸುವುದನ್ನು ಕಾಣಬಹುದು. ಮತ್ತು ಎಲ್ಲಾ ಜನಾಂಗದಲ್ಲಿ ಒಂದೇ ರೀತಿಯಾಗಿ ಇರುವುದಿಲ್ಲ. ಅವು ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಕಂಡುಬರುತ್ತವೆ. "ಜಾತ್ರೆಗಳ ತಾಯಿ ಬೇರು ಭೂತ ಕಾಲದ ಗರ್ಭದಲ್ಲಿಹೊತ್ತುಕೊಂಡಿದ್ದರೂ ಅವು ಆದಿ ಮಾನವನ ಕಾಲದಿಂದಲೇ ಧಾರ್ಮಿಕ ಆಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ."[೬]

ಸಂಪ್ರದಾಯ ಮತ್ತು ಆಚರಣೆಗಳಲ್ಲಿ ಮೇಲು ನೋಟಕ್ಕೆ ಎದ್ದು ಕಾಣುವಂತಹ ವ್ಯತ್ಯಾಸವಿಲ್ಲವಿದ್ದರೂ ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳಲ್ಲಿ ಕೆಲವು ಸ್ಪಷ್ಟ ವ್ಯತ್ಯಾಸಗಳನ್ನು ಗುರುತಿಸಬಹುದು. ಆಚರಣೆಗಳ ಒಂದು ಪ್ರಮುಖ ಲಕ್ಷಣವೆಂದರೆ ಅವು ಬಹುತೇಕವಾಗಿ ಧಾರ್ಮಿಕ ಮತ್ತು ದೈವಿಕ ಸಂಸ್ಪರ್ಶವನ್ನು ಪಡೆದಿರುತ್ತವೆ. ಅವು ಯಾವುದೋ ಒಂದು ನಂಬಿಕೆಯನ್ನು ಆಧರಿಸಿ ರೂಪುಗೊಂಡಿರುತ್ತವೆ. ಆಚರಣೆ, ದೈನಂದಿನ ನಡವಳಿಕೆಗೆ ಸಂಬಂಧಿಸಿರದೆ ವಿಶೇಷ ಸಂದರ್ಭಕ್ಕೆ ಸಂಬಂಧಿಸಿರುತ್ತದೆ. ಆಚರಣೆಗೆ ಒಂದು ನಿರ್ದಿಷ್ಟ ಫಲಾಪೇಕ್ಷೆಯಿರುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಆಚರಣೆಗಳಿಗೆ ಒಂದು ವಿಶಿಷ್ಟ ರಚನಾವಿನ್ಯಾಸವಿದ್ದು. ಈ ಅಂಶವು ಅವುಗಳನ್ನು ಸಂಪ್ರದಾಯಗಳಿಂದ ಸ್ಪಷ್ಟವಾಗಿಬೇರ್ಪಡಿಸುತ್ತದೆ.[೭]

ಸಂಪ್ರದಾಯ, ಆಚರಣೆ, ಜಾತ್ರೆಗಳು ದ್ರಾವಿಡ ಸಾಂಸ್ಕೃತಿಕ ವೈಶಿಷ್ಟ್ಯ ಹಬ್ಬಗಳು. ಪ್ರಮುಖವಾಗಿ ಪ್ರತಿ ಜನಪದ ಕುಲದೈವಗಳ ಆರಾಧನೆಯಾಗಿದ್ದು ಅದು ಕೌಟುಂಬಿಕ ವಲಯಕ್ಕೆ ಸೀಮಿತವಾಗುವಂತಹದು.

ಒಟ್ಟಿನಲ್ಲಿ ಪ್ರತಿಯೊಂದು ಸಂಪ್ರದಾಯ ಮತ್ತು ಆಚರಣೆಯ ಉದ್ದೇಶ ಭಿನ್ನವಾಗಿರುತ್ತದೆ. ವೈಯಕ್ತಿಕ ಕಾರಣಗಳನ್ನು ಮೊದಲುಗೊಂಡು ಮಳೆ, ಬೆಳೆಗಳಿಗಾಗಿ ನಡೆಸುವ ಈ ಆಚರಣೆಗಳಲ್ಲಿ ಊರು ಕೇರಿಯ ಒಳಿತಿಗೆ ಸಂಬಂಧಿಸಿದ ಧ್ಯೇಯೋದ್ದೇಶಗಳಿವೆ. ಪ್ರಾದೇಶಿಕವಾಗಿ ಆಚರಣೆಗಳು ಭಿನ್ನವಾಗಿದ್ದರು ಉದ್ದೇಶ ಒಂದೇ. ಪ್ರತಿಯೊಂದು ಆಚರಣೆಯೂ ಸಾಂಕೇತಿಕವಾಗಿ ಅರ್ಥವನ್ನು ಹೊಂದಿರುತ್ತದೆ. ಸಂಸ್ಕೃತಿ ಭಿನ್ನವಾದರೂ, ಭಾಷೆ ಭಿನ್ನವಾದರೂ ಆಚರಣೆಗಳ ಮಹತ್ವ ಇಂದಿಗೂ ಪ್ರಸ್ತುತವಾಗಿದೆ. ಅದೇ ರೀತಿಯಾಗಿ ಶ್ರೀ ಮರುಕುಂಟ್ಲೇಶ್ವರ ದೇವರ ಸಂಪ್ರದಾಯ ಮತ್ತು ಆಚರಣೆಗಳಾದ, ಗಂಗೆಪೂಜೆ, ಎತ್ತು

ದಿನದ ಮುಂಚೆ ದೇವರು ಗುಡಿಗೆ ಹೋಗಿ ಪೂಜೆ ಮಾಡಿಸಿಕೊಂಡು ತೀರ್ಥರೂಪದ ನೀರನ್ನು ಮೈ ಮೇಲೆ ಹಾಕಿಸಿಕೊಂಡು ಮನೆಗೆ ಬರುತ್ತಾರೆ. ನಂತರ ಮದುವೆಯ ಕಾರ್ಯ ಮುಂದುವರೆಯುತ್ತದೆ. ಒಂದು ವೇಳೆ ಈ ರೀತಿ ಕಾರ್ಯ ಮಾಡಿಲ್ಲ ಎಂದರೆ ಅವರಿಗೆ ಯಾವುದಾದರು ಒಂದು ಆಪತ್ತು ಎದುರಾಗುತ್ತದೆ ಎಂಬ ನಂಬಿಕೆಯಿಂದ ಈ ಆಚರಣೆಯನ್ನು ಮಾಡುತ್ತಾರೆ.

### ೫.೧.೨. ಜವಳಿ ಕಾರ್ಯಕ್ರಮ (ಕೂದಲು ತೆಗೆಸುವ ಕಾರ್ಯ)

ಶ್ರೀ ಮರುಕುಂಟ್ಲೇಶ್ವರ ಭಕ್ತರು ಹುಟ್ಟಿದ ಮಗುವಿಗೆ ಸುಮಾರು ಒಂದು ವರ್ಷ ತುಂಬುವುದರೊಳಗಾಗಿ ಇಲ್ಲವೇ ಮೂರು ಇಲ್ಲವೇ ಐದು ವರ್ಷಗಳು ತುಂಬುವುದರೊಳಗಾಗಿ ಕೂದಲು ತೆಗೆಸುವ ಕಾರ್ಯವನ್ನು ಮಾಡುತ್ತಾರೆ. ಈ ಕಾರ್ಯವನ್ನು ಮಾಡುವಂತಹ ಸಂದರ್ಭದಲ್ಲಿ ಎಲ್ಲಾ ಬಂಧು ಬಳಗದವರನ್ನು ಬರಮಾಡಿಕೊಂಡು ದೇವಸ್ಥಾನಕ್ಕೆ ಹೋಗಿ ಅಲ್ಲಿ ವಿಶೇಷ ಪೂಜೆ ಸಲ್ಲಿಸುತ್ತಾರೆ. ಪೂಜೆ ಮಾಡಿಸಿ ತೀರ್ಥದ ನೀರನ್ನು ಹಾಕಿಸಿದ ನಂತರ ಪೂಜಾರಿಯಿಂದ ಎಲೆಗತ್ರಿ ಹಾಕಿಸುತ್ತಾರೆ. ಅಂದರೆ ವೀಳ್ಯಾದೆಲೆಯನ್ನು ಕತ್ತರಿಯ ರೀತಿಯಲ್ಲಿ ಮಾಡಿ ಪೂಜಾರಿಯು ಮಗುವಿನ ಕೂದಲನ್ನು ಎಡಗೈಲಿ ಹಿಡಿದು ಬಲಗೈಲಿ ವೀಳ್ಯಾದೆಲೆಯ ಕತ್ರಿಯಿಂದ ಶಾಸ್ತ್ರ ಪ್ರಕಾರವಾಗಿ ಕತ್ತರಿಸುವ ನೆಪಮಾಡುತ್ತಾರೆ. ಇದಾದ ನಂತರ ಭಕ್ತಾದಿಗಳಿಗೆ (ಪ್ರಸಾದ) ಅನ್ನದಾಸೋಹ ಮಾಡಿಸುತ್ತಾರೆ. ಹಿಂದಿರುಗಿ ಮನೆಗೆ ಬರುವಂತಹ ಸಂದರ್ಭದಲ್ಲಿ ಮಗುವಿನ ಸೋದರಮಾವನಿಂದ ಕೂದಲನ್ನು ಕತ್ತರಿಯಿಂದ ಕತ್ತರಿಸುತ್ತಾರೆ. ಆ ಕತ್ತರಿಸುವಂತ ಸಂದರ್ಭದಲ್ಲಿ ಸೋದರಮಾವನಿಗೆ ಪೂಜೆಯ ಸಾಮಾಗ್ರಿಗಳಾದ ಎಲೆ, ಅಡಿಕೆ, ಅಕ್ಕಿ, ಬೆಲ್ಲ, ದಕ್ಷಿಣೆ, ಇಟ್ಟು ಕಾರ್ಯಕ್ರಮ ಮುಗಿಸುತ್ತಾರೆ. ಕತ್ತರಿಸುವಂತಹ ಕೂದಲನ್ನು ಒಂದು ಬಿಳಿ ಬಟ್ಟೆಯಲ್ಲಿ ಕಟ್ಟಿಕೊಂಡು ಹೋಗಿ ಬರುವ ದಾರಿಯಲ್ಲಿ ಗಂಗೆಗೆ ಬಿಡುತ್ತಾರೆ. ಆ ದಿನದಂದು ಮಗುವಿಗೆ ಹೊಸಬಟ್ಟೆ. ತಂದೆ ತಾಯಿಗಳು ಸಹ ಹೊಸ ಬಟ್ಟೆಗಳನ್ನು ಧರಿಸುತ್ತಾರೆ. ಬಂಧುಗಳು ಮಗುವಿಗೆ, ಹಣ, ಬಟ್ಟೆ, ವಸ್ತು, ಆಭರಣ ಮುಂತಾದ ರೀತಿಯಲ್ಲಿ ಬಹುಮಾನ ನೀಡುತ್ತಾರೆ. ಮತ್ತು ಎಲ್ಲರು ಸಂತೋಷವಾಗಿ ವಿಧವಿಧವಾಗಿ ಮಾಡಿದ ಸಿಹಿ ತಿಂಡಿಗಳನ್ನು ಊಟಮಾಡಿ ಮುಗಿಸುತ್ತಾರೆ. ಈ ರೀತಿ ಕಾರ್ಯಕ್ರಮಗಳು ಶ್ರೀ ಮರುಕುಂಟ್ಲೇಶ್ವರ ದೇವರ ಭಕ್ತರ ಗ್ರಾಮಗಳಲ್ಲಿ ಕಂಡುಬಂದಿದೆ.

### ೫.೧.೩. ಸಾವಿನ ಸಂದರ್ಭ

ಈ ಗ್ರಾಮಗಳಲ್ಲಿ ಯಾರಾದರೂ ಮರಣ ಹೊಂದಿದಾಗ ಅವರ ಅಂತಿಮ ಸಂಸ್ಕಾರ ಮಾಡಿದ ನಂತರ ದೇವರ ಗುಡಿಗೆ ಬಂದು ನಮಸ್ಕರಿಸಿ ಮನೆಗೆ ಬರುತ್ತಾರೆ. ಗುಡಿಗೆ ಹೋಗಿ ಬಂದರೆ ಮನೆಯಲ್ಲಿ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ ಮತ್ತು ದೋಷಬರುವುದಿಲ್ಲ ಎಂಬ ನಂಬಿಕೆ ಜನರಲ್ಲಿದೆ. ಹೀಗೆ ದೇವರಿಗೆ ನಮ್ಮ ದಿನ ನಿತ್ಯದ ಜೀವನ ಸಂಸ್ಕೃತಿಯೊಂದಿಗೆ ತನ್ನ ಸಂಬಂಧವನ್ನು ಗಟ್ಟಿಗೊಳಿಸುತ್ತಾ ಬಂದಿದ್ದಾರೆ.

೫. ೨. ವಾರ್ಷಿಕಾವರ್ತನ ಆಚರಣೆಗಳು

ಅ. ವಾರದ (ವಿಶೇಷದಿನ) ಪೂಜೆ

ಭಾನುವಾರ, ಸೋಮವಾರ ಪೂಜಾರಿಯು ಈ ದಿನಗಳಲ್ಲಿ ಬೆಳಗ್ಗೆ ಐದುಗಂಟೆಗೆ ಎದ್ದು ಮೈಗೆ ನೀರು ಎರೆಚಿಕೊಂಡು ಶ್ರೀಮರುಕುಂಟ್ಲೇಶ್ವರ ದೇವರಿಗೆ ಪೂಜೆಯನ್ನು ಮಾಡುತ್ತಾರೆ. ಪುನಃ ಸಾಯಂಕಾಲ ಆರರ ಸುಮಾರಿಗೆ ಕೈ ಕಾಲು ತೊಳೆದು ಪೂಜಾರಿ ದೇವರ ಗುಡಿಗೆ ಹೋಗಿ ಪೂಜೆಮಾಡುತ್ತಾನೆ. ಈ ದೇವರಿಗೆ ಭಾನುವಾರ ಮತ್ತು ಸೋಮವಾರಗಳು ವಿಶೇಷ ದಿನಗಳಾಗಿರುತ್ತವೆ. ಅಂದು ಯಾರಾದರೂ ಭಕ್ತರು ಯಾವುದೇ ವಿಷಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಪೂಜೆ ಮಾಡಿಸಿಕೊಂಡು, ಮುಡಿಹುಟ್ಟು ಭಯ ಭಕ್ತಿಯಿಂದ ಆ ದೇವರ ಗುಡಿಯಲ್ಲೇ ಮಲಗುತ್ತಾರೆ. ಬಂದು (ಒಳ್ಳೆದಾದರೆ ದೇವರು ಕನಸಿನಲ್ಲಿ ಬರುತ್ತಾನೆ. ಇಲ್ಲದಿದ್ದರೆ ಬರುವುದಿಲ್ಲ ಎಂಬ ನಂಬಿಕೆ) ಕನಸಿನಲ್ಲಿ ದೇವರು ಬಸವನ ಅಥವಾ ಕೊರಿಹುಡುಗ ರೂಪದಲ್ಲಿ ಬಂದು ಒಳೆ ಆದು ಯಗುವ ಸಂದರ್ಭ ಬಂದರೆ ಮಾತ್ರ ಹೇಳುತ್ತಾನೆ. ಇಲ್ಲದಿದ್ದರೆ ಕನಸೇ ಬೀಳುವುದಿಲ್ಲ. ಬೆಳಿಗ್ಗೆ ಎದ್ದು ಪೂಜೆ ಮಾಡಿಸಿಕೊಂಡು ದೇವರಿಗೆ ನಮಸ್ಕರಿಸಿ ಏಕಾಗ್ರತೆಯಿಂದ ಮನೆಗೆ ಹಿಂದಿರುಗುತ್ತಾರೆ.

ಅ. ಅಮವಾಸ್ಯೆ

ಅಮವಾಸೆಯ ದಿನ ಭಕ್ತರು ಶ್ರೀಮರುಕುಂಟ್ಲೇಶ್ವರ ದೇವರಿಗೆ ವಿಶೇಷ ಪೂಜೆ ಮಾಡಿಸುತ್ತಾರೆ. ಆ ದಿನವು ಬೇರೆ ಊರುಗಳಿಂದ ಎತ್ತಿನ ಗಾಡಿಯ ಮೂಲಕ, ಬಸ್ಸಿನ ಮೂಲಕ ಕಾಲ್ನಡಿಗೆಯಲ್ಲಿ ಬರುತ್ತಾರೆ. ಬಂಧು ಸ್ವಾಮಿಯ ದರ್ಶನಕ್ಕೆ ಬಂದು ಪೂಜೆ ಮಾಡಿಸಿಕೊಳ್ಳುತ್ತಾರೆ. ಸನ್ನಿದಿಯಾಗುತ್ತಾರೆ. ಈ ದಿನದಲ್ಲಿ ಬೇರೆ ದಿನದಲ್ಲಿ ಬರುವ ಭಕ್ತರ ಸಂಖ್ಯೆಗಿಂತ ಹೆಚ್ಚಾಗಿರುತ್ತದೆ.

ಇ. ಯುಗಾದಿ (ಉಗಾದಿ)

ಯುಗಾದಿ ಹಬ್ಬವು ನಮ್ಮ ನಾಡಿನ ದೊಡ್ಡ ಹಬ್ಬವಾಗಿದೆ. ಇದು ಜನರಿಗೆ ಜೀವನದಲ್ಲಿ ಹೊಸ ಹುಮ್ಮಸು ಚೈತನ್ಯ, ಆಶಾಕಿರಣವನ್ನು ಸೃಷ್ಟಿಸುತ್ತದೆ. ಹಳೆಯ ಮತ್ತು ಹೊಸದನ್ನು ಜೋಡಿಸುವ ಸುವರ್ಣ ಸೇತುವೆಯೇ ಯುಗಾದಿ, ಬೇವು ಬೆಲ್ಲ ಬೆರೆಯುವ ಹೊಸ ದಿನವಾಗಿದೆ.

ಈ ಹಬ್ಬವು ಪಾಲ್ಗುಣ ಮಾಸದ ಬಹುಳ ಅಮವಾಸೆಯೆಂದು ಹಳೆಯ ವರ್ಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರ ಶುಕ್ಲ ಪ್ರತಿಪದೆಯೆಂದು ಹೊಸ ವರ್ಷವನ್ನು ಸ್ವಾಗತಿಸುವುದೇ ಯುಗಾದಿ. ಹಿಂದಿನ ವರ್ಷವೆಂಬುದು ಮರಣ ಮತ್ತು ಹೊಸ ವರ್ಷದ ರೂಪದ ಶಿಶುವಿನ ಜನನ ಸೂಚಕಗಳಾಗಿವೆ. ಚೈತ್ರ ಮಾಸದಿಂದ ಹೊಸ ವರ್ಷದ ಗಣನೆ ಪ್ರಾರಂಭವಾಗುವುದೆಂದು ಹಿರಿಯರ ಅಭಿಪ್ರಾಯ. ಯುಗಾದಿ ಹಬ್ಬ ಎಂದ ಕೂಡಲೇ ನಮಗೆ ನೆನಪಿಗೆ ಬರುವುದು ಬೇವು ಬೆಲ್ಲ, ಬೇವಿನ ಚಿಗುರಿನ ಕಹಿ, ಬೆಲ್ಲದ ಸಿಹಿ ಇವೆರಡೂ ಬದುಕಿನ ಪ್ರತೀಕಗಳಾಗಿವೆ. ಇವು ನೋವು ನಲಿವುಗಳ ಸಂಕೇತವನ್ನು ಸೂಚಿಸುತ್ತವೆ. ಹಿರಿಯರ ಪ್ರಕಾರ ವಸಂತಕಾಲದಲ್ಲಿ ತಲೆದೋರುವ ಶಾರೀರಿಕ ರೋಗ ರುಜಿನಿಗಳಿಗೆ ಬೇವು ಒಳ್ಳೆಯ

ಔಷದವಂತೆ ಎಂದು ಹೇಳುವರು. ಇಂತಹ ಶ್ರೇಷ್ಟವಾದ ಹಬ್ಬವನ್ನು ಶ್ರೀಮರುಕುಂಟ್ಲೇಶ್ವರ ದೇವರ ಗ್ರಾಮಗಳಲ್ಲಿ ಸಹ ಎಲ್ಲಾರು ಆಚರಿಸುತ್ತಾರೆ.

ಈ ಹಬ್ಬದ ಸಂದರ್ಭದಲ್ಲಿ ಶ್ರೀ ಮರುಕುಂಟ್ಲೇಶ್ವರ ದೇವರಿಗೆ ಮತ್ತು ಇತರೆ ದೈವಗಳಿಗೆ ವಿಶೇಷವಾಗಿ ಪೂಜೆಯನ್ನು ಮಾಡಲಾಗುತ್ತದೆ. ಆ ದಿಸವು ಎಲ್ಲಾರು ಹೊಸ ವಸ್ತ್ರಗಳನ್ನು ಧರಿಸಿಕೊಂಡು ದೇವಸ್ಥಾನಕ್ಕೆ ಬರುತ್ತಾರೆ. ಪೂಜೆ ಮಾಡಿಕೊಂಡು ಮನೆಯಲ್ಲಿ ಸಿಹಿ ಅಡುಗೆಯನ್ನು ಮಾಡಿ ಎಲ್ಲರೂ ಒಂದೇ ಪಂಕ್ತಿಯಲ್ಲಿ ಬೆರೆತು ಊಟ ಮಾಡುತ್ತಾರೆ. ಈ ಹಬ್ಬವು ಸಂಪ್ರದಾಯದಂತೆ ಪ್ರತಿಯೊಂದು ಮನೆಯಲ್ಲಿ ಬೇವು ಬೆಲ್ಲದ ಮಿಶ್ರಣದಿಂದ ಮಾಡಿದ ಸಿಹಿಯಿಂದ ಮಾಡಿದ ಪ್ರಸಾದವನ್ನು ಭಕ್ತಾದಿಗಳು ಊರಿನ ಜನರಿಗೆ ಹಂಚುತ್ತಾರೆ.

ಮರುದಿನವು ಬೆಳಿಗ್ಗೆ ಎಲ್ಲರು ಕೂಡಿ ಓಕುಳಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಇದರ ಸಂಕೇತ ನಮ್ಮ ಜೀವನದುದ್ದಕ್ಕೂ ವೈರತ್ವವನ್ನು ಬಿಟ್ಟು ನಮ್ಮ ಬದುಕು ಬಣ್ಣದಂತೆ ಕಂಗೊಳಿಸಲಿ ಅಥವಾ ಹೂವಿನಂತೆ ಅರಳಲಿ, ಹಿಂದೆ ನಡೆದ ಘಟನೆಗಳನ್ನು ಬಿಟ್ಟು ಹೊಸ ಬದುಕನ್ನು ಆರಂಭಿಸೋಣ ಎಂಬ ಸಂಕೇತವನ್ನು ಸೂಚಿಸುವುದಾಗಿದೆ. ಇಲ್ಲಿ ಕೇವಲ ಒಂದು ಜಾತಿ ಧರ್ಮದವರು ಮಾತ್ರ ಆಚರಣೆ ಮಾಡದೇ ಇಡೀ ಮಾನವ ಕುಲವೇ ಆಚರಿಸುವಂತಹ ಹಬ್ಬವಾಗಿದೆ. ಆಸಕ್ತಿ ಪ್ರಿಯರಾದಂತಹ ನಮ್ಮ ಗ್ರಾಮೀಣ ಜನರು ಧಾರ್ಮಿಕ ಪರಂಪರೆ ಮೂಲಕ ಕ್ರೀಡಾ ಮನೋಭಾವಿಗಳಾಗಿದ್ದರೆ, ವಿವಿಧ ರೀತಿಯ ಕ್ರೀಡೆಗಳನ್ನು ಆಡುವುದರ ಮೂಲಕ ಮನಸ್ಸು ಹಗುರ ಮಾಡಿಕೊಳ್ಳುತ್ತಾರೆ. ಜೂಜು ಆಡುವುದು ತೆಂಗಿನ ಕಾಯಿ ಹೊಡೆಯುವುದು, ನಿಂಬೆಕಾಯಿ ಎಸೆಯುವುದು. ಗುಂಡು ಎತ್ತುವುದು, ಹೀಗೆ ಹಲವಾರು ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಈ ಹಬ್ಬದಲ್ಲಿ ನಾಟಕಗಳನ್ನು ಮನೋರಂಜನೆಗಾಗಿ ಆಡುತ್ತಾರೆ. ಇದು ವಿಶೇಷವಾಗಿದೆ.

**ಈ. ಗೌರಿಹಬ್ಬ**

ಗೌರಿ ಹಬ್ಬವು ಗ್ರಾಮೀಣ ಪ್ರದೇಶದಲ್ಲಿ ಶ್ರೀಮತಿಯರು ಈ ಆಚರಣೆಯನ್ನು ಬಹಳ ವೈಭವದಿಂದ ಮಾಡುತ್ತಾರೆ. ಗೌರಿ ಮಕ್ಕಳೆಂದರೆ ಗ್ರಾಮೀಣ ಪ್ರದೇಶದಲ್ಲಿ ಎಲ್ಲಾ ಸ್ತ್ರೀಯರು ಹೊಸ ಬಣ್ಣ ಬಣ್ಣದ ಉಡುಪುಗಳನ್ನು ಧರಿಸಿಕೊಂಡು ಗೌರಿಮಕ್ಕಳಾಗುತ್ತಾರೆ. ಕಾರಹುಣ್ಣಿಮೆಯಲ್ಲಿ ಎತ್ತು ನೋಡಲು ಹೋಗಬಾರದು, ಗೌರಿಹಬ್ಬದಲ್ಲಿ ಹುಡುಗೀನ ನೋಡಕೆ ಹೋಗಬಾರದು ಎಂಬ ಗಾದೆಯಂತೆ ಸತ್ಯಂಶದಿಂದ ಕೂಡಿದೆ. ಏಕೆಂದರೆ ಕಾರಹುಣ್ಣಿಮೆಯಲ್ಲಿ ಎತ್ತುಗಳನ್ನು ಮೈತೊಳೆದು ಬಣ್ಣವನ್ನು ಕೋಡುಗಳಿಗೆ ಹಚ್ಚಿ ಸುಂದರವಾಗಿ ಅಲಂಕರಿಸುತ್ತಾರೆ. ಅದೇ ರೀತಿ ಹುಡುಗಿಯರು ಕೂಡ ಆ ದಿನದಂದು ಒಳ್ಳೆಯ ಬಣ್ಣ ಬಣ್ಣದ ವಸ್ತುಗಳನ್ನು ಆಭರಣಗಳನ್ನು ಹಾಕಿಕೊಂಡು ಮುಖವನ್ನು ಚೆನ್ನಾಗಿ ಮೇಕಪ್ ಮಾಡಿಕೊಂಡಿರುವುದರಿಂದ ಎಲ್ಲಾ ಹುಡುಗಿಯರು ಸುಂದರವಾಗಿ ಕಾಣುತ್ತಿದ್ದು, ಅವರ ಮೂಲ ಸ್ವರೂಪವನ್ನು ಗುರುತಿಸದೇ ಆ ಸುಂದರ ನೋಟಕ್ಕೆ ಮನಸೋತು ಮೋಸಕ್ಕೊಳಗಾಗುತ್ತಾರೆ. ಅದೇ

ರೀತಿ ಶ್ರಿ ಮರುಕುಂಟ್ಲೇಶ್ವರ ದೇವರ ಗ್ರಾಮಗಳಲ್ಲಿ ಈ ಗೌರಿ ಹಬ್ಬವನ್ನು ಆಚರಿಸುತ್ತಾರೆ. ಈ ಗ್ರಾಮದಲ್ಲಿ ಯುವತಿಯರು ಮತ್ತು ಸ್ತ್ರೀಯರು ಸುಮಾರು ಒಂಭತ್ತು ದಿನಗಳ ಕಾಲ ಗೌರಿ ಮಕ್ಕಳಾಗಿ ಮರಗಳಿಗೆ ಉಯ್ಯಾಲೆ ಕಟ್ಟಿಕೊಂಡು ಜೋಕಾಲೆಯಾಡುತ್ತಾರೆ. ಬೇರೆ ಊರುಗಳಿಂದ ಬಂದಂತಹ ಜನರಿಂದ ಮತ್ತು ನೆಂಟರಿಂದ,[೬] ಬೀಗರಿಂದ ಕಾಣಿಕೆ ರೂಪದಲ್ಲಿ ಹಣವನ್ನು ಪ್ರೀತಿಯಿಂದ ತೆಗೆದುಕೊಂಡು ಹಬ್ಬವನ್ನು ಆಚರಿಸುತ್ತಾರೆ. ಅಂದು ಸಕ್ಕರೆ ದೀಪವನ್ನು ಬೆಳಗಿಸುವುದರ ಮೂಲಕ ಶ್ರೀ ಮರುಕುಂಟ್ಲೇಶ್ವರ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಸಿ ಅಲ್ಲಿಂದ ಗೌರಿಯನ್ನು (ಕಂತೆವ್ವ) ಕರೆದುಕೊಂಡು ಸಂಗೀತದ ವಾದ್ಯಗಳೊಂದಿಗೆ, ಜನಸಂದಣಿಯ ಮೂಲಕ ಗಂಗೆಯಲ್ಲಿ ಬಿಟ್ಟು ಬರುತ್ತಾರೆ. ಈ ರೀತಿಯ ಆಚರಣೆ ನಮ್ಮ ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಜೀವಂತವಾಗಿ ಕಂಡು ಬಂದಿದೆ.

### ಉ. ದಸರಾ

ಈ ಹಬ್ಬವು ಶ್ರೀ ಮರುಕುಂಟ್ಲೇಶ್ವರ ದೇವರ ಗ್ರಾಮಗಳಲ್ಲಿ ಆಚರಿಸುವಂತ ಹಬ್ಬವಾಗಿದೆ. ಇದು ಪುರಾತನ ಕಾಲದಿಂದ ರಾಜಮಹಾರಾಜರು ಸಹ ಈ ಹಬ್ಬವನ್ನು ಆಚರಿಸುತ್ತ ಬಂದಿದ್ದಾರೆ. ಮಹಾಭಾರತದ ಗೋಗ್ರಹಣ ಸಮಯದಲ್ಲಿ ಪಾಂಡವರ ವನವಾಸವು ಮುಗಿಯುವ ಹಂತದಲ್ಲಿತ್ತು. ಆಗ ಅರ್ಜುನನು ತಾವು ಆಯುಧಗಳನ್ನು ಬಚ್ಚಿಟ್ಟಿದ್ದ. ಶಮಿವೃಕ್ಷವನ್ನು (ಬನ್ನಿಮರ) ಪೂಜೆ ಮಾಡಿ ಆಯುಧಗಳನ್ನು ತೆಗೆದುಕೊಂಡು ಉತ್ತರಕುಮಾರನೊಡನೆ ಯುದ್ಧ ಭೂಮಿಗೆ ತೆರಳಿ ಕೌರವರನ್ನು ಸೋಲಿಸಿ ವಿರಾಟರಾಯನ ಗೋವುಗಳನ್ನು ಸೆರೆಯಿಂದ ಬಿಡಿಸಿಕೊಂಡು ಬಂದನು. ಈ ವಿಜಯೋತ್ಸವವನ್ನೇ ವಿಜಯದಶಮಿ ಎಂದು ಆಚರಿಸಲಾಗುತ್ತದೆ.

ಈ ದಿನದಂದು ಶ್ರೀ ಮರುಕುಂಟ್ಲೇಶ್ವರ ದೇವರಿಗೆ ಪೂಜೆ ವಿಶೇಷವಾಗಿ ಮಾಡುತ್ತಾರೆ. ಆ ದಿನವು ಊರಿನ ಪಕ್ಕದಲ್ಲಿ ಇರುವ ಬನ್ನಿ ಮಹಾಂಕಾಳಿಗೆ ಬನ್ನಿ ಮುಡಿಯಲು ಶ್ರೀ ಮರುಕುಂಟ್ಲೇಶ್ವರ ದೇವರ ಭಕ್ತರು ಎಲ್ಲಾ ಸಂಗೀತದ ವಾದ್ಯಗಳ ಮೂಲಕ ಹೋಗುತ್ತಾರೆ. ಆ ಬನ್ನಿಮಹಾಂಕಾಳಿಗೆ ಸೀರೆ ಉಡಿತುಂಬುವ ಸಾಮಾನುಗಳನ್ನು ಮತ್ತು ಶ್ರೀ ಮರುಕುಂಟ್ಲೇಶ್ವರ ಆಯುಧಗಳನ್ನು ತೆಗೆದು ಕೊಂಡು ಹೋಗುತ್ತಾರೆ. ಅಲ್ಲಿ ಬನ್ನಿ ಮಹಾಂಕಾಳಿಯ ಪೂಜೆಯ ಜೊತೆಗೆ ಆಯುಧಗಳನ್ನು ಸಹ ಪೂಜೆ ಮಾಡುತ್ತಾರೆ. ಅಲ್ಲಿಂದ ಮನೆಗೆ ಮರಳಿ ಬಂದನಂತರ ಊರಿನಲ್ಲಿ ಜನರಿಗೆ ಒಬ್ಬರಿಗೊಬ್ಬರು ಪರಸ್ಪರ ಬನ್ನಿಕೊಡುತ್ತಾರೆ ಮತ್ತು ಆ ದಿನವು ತಮ್ಮ ಮನೆಗಳಲ್ಲಿ ಇರುವ ಆಯುಧಗಳನ್ನು ಸಹ ಪೂಜೆ ಮಾಡುತ್ತಾರೆ.

## ೫.೨.೧. ಜಾತ್ರೆ

ಮಾನವ ಬೆಳವಣಿಗೆಯ ಪ್ರಾರಂಭದ ದಿನಗಳಲ್ಲಿ ಆಚರಣೆ ಪದ್ಧತಿಗಳಿಗೆಲ್ಲ ಧಾರ್ಮಿಕ ಸಂಪ್ರದಾಹಿಕ ಮನೋಭಾವನೆಯು ಪ್ರೇರಕವಾಗಿತ್ತು. ಹಿನ್ನೆಲೆಯಾಗಿತ್ತು. ಮಾನವನ ಮನಸ್ಸು ಪಕ್ವತೆಗೊಂಡಂತೆಲ್ಲಾ ಮನಸ್ಸಿನಲ್ಲಿ ಉದಯಿಸಿದ ನಾನಾ ರೀತಿಯ ಧಾರ್ಮಿಕ ಭಾವನೆಗಳು ರೂಪುಗೊಂಡವು. ಪ್ರಕೃತಿಯಲ್ಲಿ

ಅಡಗಿರುವ ರಹಸ್ಯಮಯವಾದ ದೈವಸೃಷ್ಟಿಯೆಂದೆ ಕಾಣಿಸಿಕೊಳ್ಳುವ ಮಳೆ, ಗುಡುಗು, ಸಿಡಿಲು, ಮಿಂಚು ಪ್ರಕೃತಿಯ ವಿಕೋಪಗಳು ಇವುಗಳ ಅರ್ಭಟಗಳನ್ನು ಬೆಳಕಿನಲ್ಲಿ ಕಾಣದ ಶಕ್ತಿಯ ಕೈವಾಡವಿದೆ ಎಂದು ಭಾವಿಸಿದ. ಅಂತಹ ಆಗೋಚರವಾದ ಶಕ್ತಿಯನ್ನು ಪೂಜಿಸುತ್ತಾ ಬಂದ ಕಲ್ಲು, ಮರ, ಮಣ್ಣು, ಭೂಮಿ, ಆಕಾಶ, ಸೂರ್ಯ, ಚಂದ್ರ, ಮುಂತಾದ ದೈವತ್ವದ ಅಂಶವನ್ನು ಕಂಡುಕೊಳ್ಳುತ್ತಾ ಬಂದು ಅಂದಿನಿಂದ ಇಂದಿನವರೆಗೂ ಮಾನವ ತಿಳಿದೋ ತಿಳಿಯದೆಯೋ ಹಲವಾರು ಆಚರಣೆಗಳನ್ನು ಮಾಡುತ್ತಲೇ ಬಂದಿದ್ದಾನೆ. ಸಮುದಾಯದವರನ್ನು ರಂಜಿಸಲು ನಮ್ಮ ಬದುಕಿನ ಒಂದು ಸಂಕೀರ್ಣ ಮತ್ತು ಸಾಮಾಜಿಕ, ಧಾರ್ಮಿಕ, ಸಂಗತಿಗಳಿಂದ ಸಮನ್ವಿತವಾದ ಸಾಂಸ್ಕೃತಿಕ ಮೊತ್ತವಾಗಿದೆ. ಎಲ್ಲಾ ಜಾತಿ, ಸಮುದಾಯದವರು ಉತ್ಸವದಲ್ಲಿ ಭಾವೈಕ್ಯತೆಯಿಂದ ಭಾಗವಹಿಸುತ್ತಾರೆ. ಹಾಗೂ ಜನಪದ ರಂಗಕಲೆಗಳು ಸಹ ಪ್ರದರ್ಶನಗೊಳ್ಳುತ್ತವೆ. ಪ್ರತಿಯೊಂದು ಜಾತ್ರೆ ಆಯಾ ಧರ್ಮದ ಮತತತ್ವಗಳ ಪ್ರಸಾರಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಸಂಸ್ಕೃತಿ ಸಾಹಿತ್ಯ ವಿವಿಧ ವಿದ್ವಾಂಸರಿಂದ ಪ್ರವಾಚನಗೊಳಿಸುತ್ತಾರೆ. ಭಾವೈಕ್ಯತೆ ಮತ್ತು ಸಂಸ್ಕೃತಿಯ ಪರಿಸರವೂ ಆಗುತ್ತದೆ. ಸಮಯ, ಸಂಪತ್ತು ಜಾತ್ರೆ ಎಲ್ಲರ ಕ್ಷೇಮಾಭಿವೃದ್ಧಿಗಾಗಿ ಒಂದು ನಿಗದಿತವಾದ ಸಮಯದಲ್ಲಿ ದೇವರುಗಳ ಹೆಸರಿನಲ್ಲಿ ಧಾರ್ಮಿಕ ಕ್ಷೇತ್ರವೊಂದರಲ್ಲಿ ಸಾಮೂಹಿಕವಾಗಿ ಆಚರಿಸುವ ಧಾರ್ಮಿಕ ವಿಧಿಯಾಗಿ ಇಂದು ರೂಢಿಯಲ್ಲಿದೆ.

ಗ್ರಾಮದಿಂದ ನಗರದವರೆಗೆ ಜಾತ್ರೋತ್ಸವವೊಂದು ಪುಣ್ಯ ಪ್ರಸಂಗವಾಗಿ ಮುನ್ನಡೆಯಲು ತಲೆ ತಲೆಮಾರಿನಿಂದ ಮುಂದುವರಿಯುತ್ತಾ ಬಂದ ಸಂಸ್ಕೃತಿಯ ಪ್ರವಾಹವನ್ನು ಮುಂದುವರೆಸುವುದೇ ಆಗಿದೆ.

ಜಾತ್ರೆಯಿಂದ ಪ್ರತಿಯೊಬ್ಬನ ಮನಸ್ಸನ್ನು ಹಗುರಮಾಡಿಕೊಳ್ಳಲು ಮತ್ತು ತಮ್ಮ ದುಡಿಮೆಯ ದವಡೆಯಿಂದ ಅಲ್ಪವಿರಾಮ ಪಡೆದುಕೊಳ್ಳಲು ಈ ಜಾತ್ರೆಗಳನ್ನು ಆಚರಿಸುತ್ತಾರೆ. ಜಾತ್ರೆಗಳು ದೇವ ದೇವತೆಗಳ ಸಂಪ್ರೀತಿಗಾಗಿಯೇ ಹುತಾತ್ಮಕ ಗೌರವಾರ್ಥವಾಗಿಯೇ ಸಮಾಜ ಸುಧಾರಣೆಗಾಗಿಯೇ ಜರುಗಿ ಆ ನೆಪದಲ್ಲಿ ಧಾರ್ಮಿಕ, ಆರ್ಥಿಕ, ಸಾಮಾಜಿಕ, ತಾತ್ವಿಕ ಮತ್ತು ರಾಜಕೀಯ ಸಂಘಟನೆಗೆ ವ್ಯಷ್ಠ ಹಾಗೂ ಸಮಷ್ಠ ಹಿತವನ್ನು ಏಕಕಾಲದಲ್ಲಿ ಸಾಧಿಸುತ್ತದೆ. ಹೀಗೆ ಆಚರಣೆಗೆ ಬಂದ ಆರಾಧನೆಯ ಕುಟುಂಬಗಳಿಗೆ ಮೀಸಲಾಗಿತ್ತು. ಜನಸಂಖ್ಯೆಯ ಬುದ್ಧಿ ವಿಕಾಸ ನಾಗರೀಕತೆ ಬೆಳೆದಂತೆ ಆರಾಧನೆ ಕುಟುಂಬದ ಚೌಕಟ್ಟನ್ನು ಮೀರಿ ಸಮಾಜವನ್ನು ಸೇರಿತು. ಬರುಬರುತ್ತಾ ಇದರ ವ್ಯಾಪ್ತಿ ಗ್ರಾಮದಿಂದ ನಗರಕ್ಕೆ ನಿಯಮಿತತನ ಪಡೆದು ಆರಾಧನೆಯೇ ಜಾತ್ರೆಗಳಿಗೆ ಕಾರಣವಾಯಿತು.

## ಪದನಿಷ್ಪತ್ತಿ

ಆರಾಧನೆ ಪದಕ್ಕೆ ಸೇವೆ, ಪೂಜೆ ಎಂಬ ಅರ್ಥಗಳಿವೆ. ಜಾತ್ರೆ ಇವುಗಳನ್ನು ಒಳಗೊಂಡಿರುತ್ತವೆ. ಆರಾಧನೆ ಜಾತ್ರೆ, ಜಾತ್ರೆಗೆ ಆರಾಧನೆ ಒಂದಕ್ಕೊಂದು ಪೂರಕವಾಗಿವೆ. ಇವೆರಡರ ಸ್ವರೂಪದಲ್ಲಿ ವ್ಯತ್ಯಾಸ ಕಂಡುಬಂದರೂ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ. ಆದರೆ ಜಾತ್ರೆಗಳ ಉಗಮವನ್ನು ನಿಖರವಾಗಿ ಹೇಳುವುದು ಕಷ್ಟವಾದರೂ ಸ್ಥೂಲವಾಗಿ ಆರಂಭದಲ್ಲಿ ಆರಾಧನೆ ಜಾತ್ರೆಗಳು ಎನ್ನಬಹುದು.

**ನಿಘಂಟುಗಳ ಪ್ರಕಾರ ಜಾತ್ರೆ:** ಎಂದರೆ ಯಾತ್ರೆಯ ತದ್ಭವ ರೂಪ. ಮನುಷ್ಯ ಪ್ರಾಣಿಯು ಈ ಸೃಷ್ಠಿಯಲ್ಲಿ ಬದಲಾಗುವ ಸನ್ನಿವೇಶಗಳು ಕೂಡಿರುತ್ತವೆ. ಅಥವಾ ಪುಣ್ಯಕ್ಷೇತ್ರದರ್ಶನವೇ ಧಾರ್ಮಿಕ ಉದ್ದೇಶದಿಂದ ಮಾಡುವ ಪ್ರಯಣ, ಯಾತ್ರಿಯಾಗಿದೆ.

* ಒಂದು ದೇವರ ವಿಶೇಷತೆಯಲ್ಲಿ ಕಂಡುಬರುವ ರಥೋತ್ಸವ ಕಾರ್ಯಕ್ರಮಗಳಿಗೆ ಜಾತ್ರೆ.

* ದೇವರ ಸನ್ನಿದಿಯಲ್ಲಿ ಜನರ ಗುಂಪು ಅಥವಾ ಸಮೂಹಕ್ಕೆ ಅಥವಾ ಜಾತ್ರೆ ಪರಿಸೆ ಎನ್ನಬಹುದು.

ಉಕ್ಕಲ ಹಿಂದಿನಿಂದ ದೇವಿಗೆ ಮಾಮೂಲಕ್ಕೇನಿಗರಿ ಜಾತ್ರೆಮಾಳ್ಪಂ ಮೊಕ್ಕಳಿಗಂ ಎಂಬುದು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಜಾತ್ರೆ, ಪರಿಸೆ, ತೇರು ಎಂಬ ಉಲ್ಲೇಖ ಇದೆ.

ಇಂಗ್ಲೀಷ್‌ನಲ್ಲಿ Echudy ಎಂದು (ಈಚುಡಿ) ಕರೆಯುತ್ತಾರೆ. ಈಚುಡಿ ಎಂದರೆ ಕನ್ನಡದಲ್ಲಿ ಹಬ್ಬದೂಟದ ದಿನ ಎಂದರ್ಥ. ಯಾತ್ರೆಯ ತದ್ಭವರೂಪವೇ ಜಾತ್ರೆಯಾಗಿದೆ ಎಂದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ. ಯಾವುದೋ ಒಂದು ನಿಗದಿತವಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದು ಜಾತ್ರೆ ಎಂಬುದು ವರ್ಷಕ್ಕೆ ನಿಗದಿಯಾದ ಇನ್ನಿತರ ಅವಧಿಗೊತ್ತಾದ ಸ್ಥಳದಲ್ಲಿ ಒಂದು ದಿನವೂ, ಇನ್ನು ಹೆಚ್ಚಿನ ದಿನಗಳವರೆಗೂ ಜನ ಸೇರಿ ನಡೆಸುವ ಉತ್ಸವ ಹಂ.ಪ.ನಾ.ಅವರು ಜಾತ್ರೆಗಳನ್ನು ಎರುಡು ರೀತಿಯದಾಗಿ ಹೇಳಿದ್ದಾರೆ.

೧. ಆರ‍್ಯ ಮತ್ತು ಶಿಷ್ಟ ದೇವತೆಗಳ ಜಾತ್ರೆ

೨. ದ್ರಾವಿಡ ಹಾಗೂ ಗ್ರಾಮದೇವತೆಗಳ ಜಾತ್ರೆ

**ದೇ.ಜವರೇಗೌಡರ ಪ್ರಕಾರ:** ಜಾನಪದ ಸಂಸ್ಕೃತಿ ಮತ್ತು ನಾಗರಿಕ ಸಂಸ್ಕೃತಿಯಲ್ಲಿ ವ್ಯತ್ಯಾಸವಿಲ್ಲದಿದ್ದರೂ ಅವು ಸಮಾನಾಂತರವಾಗಿ ವಿಕಾಸ ಹೊಂದುತ್ತವೆ ಎಂದು ಹೇಳಿದ್ದಾರೆ.

ಜಾತ್ರೆಯ ಮೂಲಪದವಾದ ಯಾತ್ರೆಗೆ ಚಲನೆ, ಪ್ರಯಾಣ, ಸೈನ್ಯಾಕ್ರಮಣ, ತೀರ್ಥಯಾತ್ರೆ, ಹಬ್ಬ, ಸಂತೆ, ಮೆರವಣಿಗೆ, ರಸ್ತೆ, ಮರಣ, ಸಾಧನೆ, ವಾಡಿಕೆ, ವಾಹನ, ನಾಟಕೀಯ, ಮನರಂಜನೆ ಎಂಬ ಅರ್ಥಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಜಾತ್ರೆಗಳ ಇತಿಹಾಸ ಸುಮಾರು ಒಂದು ಸಾವಿರವರ್ಷಗಳ ಹಿಂದಕ್ಕೆ ಬಿತ್ತರಿಸಲು ಸಾಧ್ಯವಿದೆ ಎಂದು ದೇ.ಜೆ.ಗೌರವರು ಹೇಳಿದ್ದಾರೆ.

ಜಾತ್ರೆಗಳ ವರ್ಗೀಕರಣವನ್ನು ಹಲವು ವಿದ್ವಾಂಸರು ತಮ್ಮದೇ ಆದ ಧ್ಯೇಯನ್ನಿಟ್ಟುಕೊಂಡು ಜಾತ್ರೆಗಳ ವರ್ಗೀಕರಣ ಮಾಡಿದ್ದಾರೆ. ಅವುಗಳೆಂದರೆ.

**ಎಂ.ಸಿ.ಲಕ್ಮೆರವರು: ಜಾತ್ರೆಗಳನ್ನು ಎರಡು ರೀತಿಯಲ್ಲಿ ವಿಂಗಡಿಸಿದ್ದಾರೆ. (ಉ.ಕರ್ನಾಟಕ)**

೧. ಗುಡಿ, ಜಾತ್ರೆಗಳು

೨. ಮರಜಾತ್ರೆಗಳು

**ಕೆ. ಚಿನ್ನಪ್ಪಗೌಡ ಅವರು ತಮಿಳುನಾಡಿನ ಅನ್ವಯದ ಐದು ವಿಧಗಳಲ್ಲಿ ಜಾತ್ರೆಗಳನ್ನು ವರ್ಗೀಕರಿಸಿದ್ದಾರೆ.**

೧. ಭೂತಗಳ ಜಾತ್ರೆಗಳು

೨. ಮಾರಿ ಜಾತ್ರೆಗಳು

೩. ಸಿಡಿ ಜಾತ್ರೆಗಳು

೪. ಕೋಟೆ ಚನ್ನಯ್ಯಬೈದ್ಯರ್ಕಳ ಜಾತ್ರೆ

೫. ನಾಗಮಂಡಲ ಜಾತ್ರೆ"[೬]

ಹೀಗೆ ಈ ಜಾತ್ರೆಗಳ ಬಗ್ಗೆ ಹಲವಾರು ವಿದ್ವಾಂಸರು ಹಲವಾರು ದೈವದಲ್ಲಿ ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಜಾತ್ರೆ ಹಲವಾರು ಹಳ್ಳಿಗರ ಜೀವನದಲ್ಲಿ ಮಹತ್ವದ ಪಾತ್ರವಹಿಸಿವೆ. ಎಲ್ಲಾ ಸಮುದಾಯದವರನ್ನೇ ರಂಜಿಸಲು ನಮ್ಮ ಬದುಕಿನ ಒಂದು ಸಂಕೀರ್ಣ ಮತ್ತು ಸಾಮಾಜಿಕ, ಧಾರ್ಮಿಕ ಸಂಗತಿಗಳಿಂದ ಸಮನ್ವಿತವಾದ ಸಾಂಸ್ಕೃತಿಕ ಮೊತ್ತವಾಗಿದೆ. ಎಲ್ಲಾ ಜಾತಿ ಸಮುದಾಯವರು ಉತ್ಸವದಲ್ಲಿ ಭಾವೈಕ್ಯತೆಯಿಂದ ಭಾಗವಹಿಸುತ್ತಾರೆ. ಹಾಗೂ ಜನಪದ ರಂಗ ಕಲೆಗಳು ಸಹ ಪ್ರದರ್ಶನಗೊಳ್ಳುತ್ತವೆ. ಅನೇಕರ ದೃಷ್ಟಿಯಲ್ಲಿ ಹಳ್ಳಿಗಳಲ್ಲಿ ಜಾತ್ರೆಯೆಂದರೆ ಇಡೀ ಗ್ರಾಮದ ಹಬ್ಬವಾಗಿರುತ್ತದೆ. ಬಂಧು ಬಳಗವನ್ನು ಆಹ್ವಾನಿಸುವುದು, ಊರು ಕೇರಿಗಳನ್ನು ಹತ್ತಿರ ತಂದು ಒಂದು ಮಾಡುವುದು. ಇದೇ ಅಸಂದರ್ಭದಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಅನೇಕ ಧರ್ಮಗಳ ಸಂಗಮವನ್ನು ಇಲ್ಲಿ ಕಾಣುವುದರಿಂದ ಜಾತಿಯ ಸಮಸ್ಯೆ ಇಲ್ಲಿ ಕಂಡು ಬರುವುದಿಲ್ಲ. ಇಲ್ಲಿಯ ಜನರಲ್ಲಿ ಸಂಪತ್ತು ನಾಶವಾಗಿರುವುದಿಲ್ಲ, ಧರ್ಮವೇ ನಿಜವಾದ ಸಂಪತ್ತು ಎಂದು ಭಾವಿಸಿಕೊಂಡಿರುತ್ತಾರೆ. ಶ್ರೀ ಮರುಕುಂಟ್ಲೇಶ್ವರ ದೇವರು ಭಕ್ತರು ಅಸಂಖ್ಯಾತರು. ಈ ಸ್ವಾಮಿಯ ಭಕ್ತರು ಇಂದಿಗೂ ಸುಮಾರು ದೂರದ ೩೦-೪೦ ಊರುಗಳಲ್ಲಿ ಇದ್ದಾರೆ. ಅವುಗಳೆಂದರೆ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಹೊಸಪೇಟೆ, ಕಮಲಾಪುರ, ರಾಯದುರ್ಗ, ಚಳ್ಳಕೇರಿ, ಮುಂತಾದ ಊರುಗಳಲ್ಲಿ ಭಕ್ತರನ್ನು ಕಾಣಬಹುದು. ಮುಖ್ಯವಾಗಿ ನಾಯಕ (ವಾಲ್ಮೀಕಿ) ಮತ್ತು ಲಿಂಗಾಯಿತರ ಹಾಗೂ ದಲಿತ ಜನಾಂಗದ ದೂರದ ಊರುಗಳಿಂದ ಬಂದ ಮರುಕುಂಟ್ಲೇಶ್ವರನೇ ನಮ್ಮ ಮನೆದೇವರು ಎಂದು ಹೇಳುತ್ತಾರೆ. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ ಚನ್ನಪ್ಪ, ಚನ್ನಮ್ಮ, ಮರಿಸ್ವಾಮಿ ಎಂದು ಹೆಸರಿಡುವ ರೂಢಿಯೂ ಇಂದಿಗೂ ಸಹ ಕಂಡು ಬಂದಿದೆ.

## ಶ್ರೀಮರಕುಂಟ್ಲೇಶ್ವರ ಜಾತ್ರೆಯ ವಿವಿಧ ಕಾರ್ಯಕ್ರಮಗಳು

ದಿನಾಂಕ ೨೪.೦೨.೨೦೦೮ನೇ ಭಾನುವಾರ ಉಪವಾಸ ಮಾಡುವುದು.

ದಿನಾಂಕ ೨೫.೦೨.೨೦೦೮ನೇ ಸೋಮವಾರ ಮುಂಜಾನೆ ೧೦ರ ಸುಮಾರಿಗೆ ಗಂಗೆ ಪೂಜೆ ಮಾಡಿಕೊಂಡು ಹೊಸ ಪೌಳಿಗೆ ಹೊರಡುವುದು.

ರಾತ್ರಿ (ದೊಡ್ಡಮುಂಜಾನೆ) ೫ ಗಂಟೆಗೆ ಅಗ್ನಿ ಕುಂಡ ಮತ್ತು ಭಜನೆಗಳು

ದಿನಾಂಕ ೨೬.೦೨.೨೦೦೮ನೇ ಮಂಗಳವಾರ, ದೇವರ ಎತ್ತುಗಳ ಮೆರವಣಿಗೆ, ಮಣಿವು ಬೆಲ್ಲ ಇಡುವುದು, ಹಣ್ಣು, ಕಾಯಿ, ಮಾಡಿಸುವುದು, ಆ ದಿನವು, ಕೋಲಾಟ ಹಾಗೂ ಮನೋರಂಜನೆ ಕಾರ್ಯಕ್ರಮಗಳಿರುತ್ತವೆ.

೨೭.೦೨.೨೦೦೮ನೇ ಬುಧವಾರ ಭಕ್ತಾದಿಗಳ ಕಾರ್ಯಕ್ರಮಗಳು ಪಾನಕಬಂಡಿ, ಮುಡಿ ಒಪ್ಪಿಸುವುದು.

೨೮.೦೨.೨೦೦೮ನೇ ಗುರುವಾರ ಸಾಯಂಕಾಲ ೪ ಗಂಟೆಗೆ ದೇವರ ಹೂಮಾಲೆ, ಕಾಯಿ, ಹರಾಜು ಇಡುವುದು ಮತ್ತು ೬ ಗಂಟೆಗೆ ದೇವರು ಗರ್ಭ ಗುಡಿಗೆ ಮರುಳುವುದು.

**ಪಾನಕ ಬಂಡಿ**

ಶ್ರೀ ಮರುಕುಂಟ್ಲೇಶ್ವರ ದೇವರ ಭಕ್ತಾದಿಗಳು ಆ ಗ್ರಾಮದಲ್ಲಿ ಯಾರಾದರೂ ಹರಕೆ ಹೊತ್ತುಕೊಂಡರೆ ಪಾನಕವನ್ನು ಪ್ರತಿವರ್ಷ ಒಬ್ಬರೂ ಮೂರುದಿನಗಳ ಕಾಲ ದೇವರಿಗೆ ಹರಕೆಯನ್ನು ಮುಟ್ಟಿಸುತ್ತಾರೆ. ಈ ಪದ್ಧತಿಯು ಪೂರ್ವಕಾಲದಿಂದಲೇ ನಡೆದು ಬಂದಿರುವ ಪದ್ಧತಿಯಾಗಿದೆ. ಮಂಗಳವಾರ, ಬುಧುವಾರ ಮತ್ತು ಗುರುವಾರ ಭಕ್ತಾದಿಗಳು ಜಾತ್ರೆಯಲ್ಲಿ ಬಂದ ಜನರಿಗೆ ಪಾನಕವನ್ನು ಹಾಕುತ್ತಾರೆ. ಈ ಬಂಡಿಯನ್ನು ಮೆರವಣಿಗೆಯ ಮೂಲಕ ಎತ್ತುಗಳಿಗೆ ಜೂಲ್, ಕುಚ್ಚ್ ಮತ್ತು ಇತರ ಸಂಗೀತವಾದ್ಯದ ಸ್ವರ ಮಯದಿಂದ ಪ್ರತಿಯೊಂದು ಬಂಡಿಗೊನೆಗೆ ಬಾಳೆಯದಂಡನ್ನು ಕಟ್ಟಿಕೊಂಡ ಅಲಂಕಾರ ಮಾಡಿ ಹೂಮಾಲೆಯ ಸರಳಿಂದ ಆ ರಥಕ್ಕೆ (ಬಂಡಿ) ಹಾಕಿಕೊಂಡು ಪಾನಕ ಮಾಡಿಕೊಂಡು ದೇವರಿಗೆ ಪೂಜೆ ಮಾಡಿಕೊಂಡು ಜಾತ್ರೆಯಲ್ಲಿ ಬಂದ ಜನರಿಗೆ ಹಾಕುತ್ತಾರೆ. ಈ ಒಂದು ಹರಿಕೆಯನ್ನು ಸುತ್ತಲಿನ ಯಾವ ಊರಿನವರು ಸಹ ಮಾಡಬಹುದಾಗಿದೆ.

**ಜಾತ್ರೆಯಲ್ಲಿ ಪ್ರದರ್ಶನ ಕಲೆಗಳು**

ಶ್ರೀಮರುಕುಂಟ್ಲೇಶ್ವರ ದೇವರ ಜಾತ್ರೆಯ ಸಂದರ್ಭದಲ್ಲಿ ಅನೇಕ ರೀತಿಯ ಪ್ರದರ್ಶನ ಕಲೆಗಳು ಪ್ರದರ್ಶನಗೊಳ್ಳುತ್ತವೆ. ಅವುಗಳಲ್ಲಿ ಪ್ರಮುಖವುಗಳೆಂದರೆ ಬಯಲಾಟ, ಸಾಮಾಜಿಕ ನಾಟಕ, ಕೋಲಾಟ, ಮತ್ತು ಭಜನೆ ಪ್ರಮುಖವಾದವು.

**ಬಯಲಾಟ**

ಗ್ರಾಮೀಣ ಪ್ರದೇಶಗಳಲ್ಲಿ ಬಯಲಾಟ ಎಂದರೆ ಬಹಳ ಎಷ್ಟು ಪಡುತ್ತಾರೆ. ಏಕೆಂದರೆ ಅದು ಗುಂಡುವಿದ್ಯೆ ವೀರತನ, ಶೂರತನ ತೋರಿಸುವ ಉದ್ದೇಶದಿಂದ ಈ ಕಲೆಯನ್ನು ಈ ಗ್ರಾಮಗಳಲ್ಲಿ ಪ್ರದರ್ಶನ ಮಾಡುತ್ತಾರೆ. ಬಯಲಾಟವನ್ನು ಬಯಲಿನಲ್ಲಿ ವಿಶಾಲವಾದ ಜಾಗದಲ್ಲಿ ಆಡುವುದರಿಂದ ಬಯಲಾಟ ಎಂಬ ಹೆಸರು ಬಂದಿದೆ. ಬಯಲಾಟ ಇಡೀ ರಾತ್ರಿ ನಡೆಯುವ ಒಂದು ಸಂಪ್ರದಾಯಿಕ ಕಲೆಯಾಗಿದೆ. ನೋಡುವರಿಗೆ ಬೇಸರ ಬಾರದಂತೆ ವಿವಿಧ ಬಗೆಯ ಕಲಾ ಪ್ರಕಾರಗಳು ಅದರಲ್ಲೂ ಮೈಜುಮ್ಮೆನಿಸುತ್ತದೆ. ಒಂದುರ ಭಾವನ್ನು ಮತ್ತೊಂದು ತುಂಬಿಕೊಂಡುರುತ್ತವೆ. ಇಲ್ಲಿ ಕಂಡು ಬರುವ ಕುಣಿತ, ನೃತ್ಯ, ವಸ್ತು, ವಸ್ತ್ರಗಳ ವಿವಿಧ ರೀತಿಯಲ್ಲಿ ಮುಖ್ಯವಾಗಿ ಕಥಾ ಭಾಗವನ್ನು ಕಾಣಿಸಿಕೊಳ್ಳುತ್ತವೆ. ಈ ನಾಟಕದಲ್ಲಿ ಸಂಭಾಷಣೆ ಸೊಗಸಾಗಿದ್ದರೂ ಸಂಗೀತ ಮಹತ್ವವಾದ ಕೆಲಸ ಮಾಡುತ್ತದೆ. ಕೋಪ, ದುಃಖ ಕರುಣೆ, ಆವೇಶ, ಮೊದಲಾದ ಭಾವಾಭಿವ್ಯಕ್ತಿಯನ್ನು ಸಂಗೀತ ಸಮರ್ಪಕವಾಗಿ ಅಭಿವ್ಯಕ್ತಿಗೊಳಿಸಬಲ್ಲದು. ಇಲ್ಲಿ ಬಳಸಲಾದ ಸಂಗೀತದ ವಾದ್ಯಗಳು, ತಬಲ, ಪಿಯನು, ತಾಳ,

ಮದ್ದಳೆ ಗೆಜ್ಜೆಯನ್ನು ಬಳಸುತ್ತಾರೆ. ಪ್ರತಿವರ್ಷ ಶ್ರೀಮರುಕುಂಟ್ಲೇಶ್ವರ ಜಾತ್ರೆಯಲ್ಲಿ ಆಯಾ ಗ್ರಾಮಗಳಲ್ಲಿ ಈ ನಾಟಕವನ್ನು ಪ್ರದರ್ಶನ ಮಾಡುತ್ತಾರೆ. ಹರಿಜನರು, ನಾಯಕರು (ವಾಲ್ಮೀಕಿ) ಜನಾಂಗದವರು ಕಲೆಯನ್ನು ಪ್ರದರ್ಶಿಸುತ್ತಾರೆ. ಹೆಚ್ಚಾಗಿ ರಾಮಾಯಣ ಮತ್ತು ಮಹಾಭಾರತದ ಕಥಾವಸ್ತುವುಳ್ಳ ಕಲೆಯನ್ನು ಪ್ರದರ್ಶನ ಮಾಡುತ್ತಾರೆ. ಇಲ್ಲಿ ಕಂಡುಬರುವ ವರ್ಣಕ, ವಸ್ತುಕ, ಭಾಷೆ, ತಂತ್ರ ಮುಂತಾದವುಗಳನ್ನು ಎತ್ತಿ ತೋರಿಸುತ್ತಾರೆ. ಉದಾ:- ದುಶ್ಯಾಸನಕಾಳಗ, ವೀರಭೀಮನ್ಯನಕಾಳಗ, ಸುಂದೋಪ ಸುಂದರ, ಕರ್ಣಾರ್ಜುನಕಾಳಗ, ನುಂಕಪ್ಪನಕಥೆ ಕರಿ, ರಾಯಸ ಕಾಳಗ, ಪಾರ್ಥವಿಜಯ, ಸಂಗ್ಯಾಬಾಳ್ಯ, ಕುರುಕ್ಷೇತ್ರ, ಐರಾವಣ ಮೈರಾವಣ, ಶಶಿರೇಖಪರಾಣಿಯ, ಈ ನಾಟಕಗಳನ್ನು ಆಡುತ್ತಾರೆ. ಈ ನಾಟಕಗಳಲ್ಲಿ ಗಂಡು ಮತ್ತು ಹೆಣ್ಣಿನ ಪಾತ್ರಗಳು ಗಂಡಸರೇ ಅಭಿನಯಿಸುತ್ತಾರೆ. ಈ ಕಲೆಗಳ ಜಾತ್ರೆಯ ಸಮಯದಲ್ಲಿ ನಂಟರಿಷ್ಟರ ಎದುರಿಗೆ ಬಹಳ ವಿಜೃಂಭಣೆಯಿಂದ ಕಲೆ ಪ್ರದರ್ಶಿಸಲಾಗುತ್ತದೆ. ಅದು ಹೆಚ್ಚಾಗಿ ಹರಿಜನರು ಮತ್ತು ನಾಯಕ ಜನಾಂಗದವರು ಮಾತ್ರ ಆಡುತ್ತಾರೆ.

**ನಾಟಕ**

ಈ ಕಲೆಯು ಮಾನವನ ಸಂತೋಷದ ಅಭಿವ್ಯಕ್ತಿಯ ಕಲೆಯಾಗಿದೆ. ಕಲೆ ಸಂಗೀತ, ಮಾನವನ ಅಭಿವ್ಯಕ್ತಿಯ ರೂಪಗಳು, ನಾಗರೀಕತೆ ಬೆಳೆದಂತಲ್ಲಾ ಮಾನವನಿಗೆ ಬುದ್ಧಿವಿಕಾಸವಾದಂತೆ ಅವನು ಹಲವಾರು ರೀತಿಯ ಮನೋರಂಜಕವಾದ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾನೆ. ಅವು ಹಬ್ಬ ಹರಿದಿನ, ಜಾತ್ರೆ ಆಚರಣೆಯ ಸಂಪ್ರದಾಯದ ಮೂಲಕ ಈ ಸಾಮಾಜಿಕ ನಾಟಕಗಳನ್ನು ಆಡುತ್ತಾರೆ. ಈ ಕಲೆಗಳು ಗ್ರಾಮಗಳಲ್ಲಿ ಜಾತ್ರೆಯ ಸಮಯದಲ್ಲಿ ಕಂಡುಬರುತ್ತವೆ. ಈ ನಾಟಕದ ಕಥಾವಸ್ತುಗಳಾದ ಪ್ರೀತಿ, ಪ್ರೇಮ, ಕರುಣೆ, ದುಃಖ, ಸಾಮಾಜಿಕ ನೀತಿನಿಯಮ ಜಗತ್ತಿನ ಮೇಲೆ ನಿಂತಿರುವ ಸಾಮಾಜಿಕರಿಗೆ ತೋರಿಸುವ ಕಲೆ ಆಧುನಿಕ ಜನಮಾನವರಿಗೆ ಪರಿಚಯಿಸು ಕಲೆಯ ತಿರುಳನ್ನು ಒಮ್ಮೆತಗೊಳಿಸುತ್ತದೆ. ಆಧುನಿಕ ಕಾಲದ ಮನೋರಂಜನವಾದ ಸಂಗೀತವಾದ್ಯಗಳು, ತಂತ್ರಜ್ಞಾನದಿಂದ ಕೂಡಿ ಮಾನವನ ಮನಸ್ಸಿಗೆ ರೂಪಗೊಂಡಿರುತ್ತವೆ. ಇದರಲ್ಲಿ ಅತೀ ಹೆಚ್ಚು ಕಂಡುಬರುವ ಆಧುನಿಕ ನೃತ್ಯಗಳು, ಯುವ ಪೀಳಿಗೆಗೆ ಮನಸೋಲುವ ಚಲನಚಿತ್ರಗಳ ಹಾಡುಗಳು, ಹೊಸ ಹೊಸ ವಸ್ತ್ರ ವಿನ್ಯಾಸಗಳು, ಹೊಸ ಹೊಸ ಡೈಲಾಗ್ ಕಂಡುಬಂದಿವೆ. ಉದಾಹರಣೆಗೆ ಕೆಲವು ಸಾಮಾಜಿಕ ನಾಟಕಗಳು ಮತ್ತು ಪೌರಾಣಿಕ ನಾಟಕಗಳೆಂದರೆ 'ಹುಚ್ಚು ಮೆಚ್ಚಿದ ಹೂ', 'ಒಂದೇ ಕೊರಳಿಗೆ ಎರಡುತಾಳಿ', ಅಕ್ಷತೆಗೆ ಬೆಲೆ ಇಲ್ಲ, ಬಿಕ್ಷುನಿಗೆ ನೆಲೆ ಇಲ್ಲ, ಕಣ್ಣಿಟ್ಟ ಹೆಣ್ಣು, ಹಣೆಬರಹಕ್ಕೆ ಹೊಣೆಯಾರು, ಕುಡುಕಕಟ್ಟಿದ ಪ್ರೇಮಕೋಟೆ, ಬಿಸಿಲಿಗೆ ಬಾಡದ ಹೂ, ರೌಡಿಗಳ ರಾಜ್ಯದಲ್ಲಿ ರಾಮನಿಗೆ ಪಟ್ಟ, ಹೀಗೆ ನಾಟಕಗಳನ್ನು ಗ್ರಾಮೀಣರು ಆಡುತ್ತಾರೆ.

ಯಕ್ಷಗಾನ ನಾಟಕಗಳಾದ ರಕ್ತರಾತ್ರಿ, ಉತ್ತರ ಭೂಪ, ಪಾಂಡುವಿಜಯ, ಈ ರೀತಿ ಸಾಮಾಜಿಕ ಮತ್ತು ಪೌರಾಣಿಕ ನಾಟಕ ಆಡುತ್ತಾರೆ.

## ಕೋಲಾಟ

ಈ ಒಂದು ಜನಪ್ರಿಯ ಕಲೆಯಲ್ಲಿ ಕೋಲಾಟವು ಮುಖ್ಯವಾಗಿ ಕಂಡುಬಂದಿದೆ. ಲಯ, ಕುಣಿತಗಳು, ದಾಟಿ (ಹಾಡಿನ) ಮುಖ್ಯವಾಗಿ ಕಾಣಿಸಿಕೊಳ್ಳುತ್ತವೆ. ಇದು ಪೂರ್ವಕಾಲದಿಂದಲೂ ಜನ ಪ್ರಿಯವಾದ ಮನೋರಂಜಕ ಕಲೆಯಾಗಿದೆ. ಇದನ್ನು ನಿರ್ದೇಶಿಸುವ ಕಲಾವಿದ ಬಹಳ ಪರಿಣಿತಿಯನ್ನು ಪಡೆದಿರುತ್ತಾರೆ. ಕಲಾವಿದರು ಕಾಲಿಗೆ ಮತ್ತು ಕೈಗೆ ಗೆಜ್ಜೆಯ ಕಟ್ಟಿಕೊಂಡು ಕುಣಿಯುವ ರೀತಿ, ಸನ್ನಿವೇಶ, ಬೆಡುಗು, ಜಿಗಿತ, ಉತ್ಸಾಹಗಳು ಕಲಾತ್ಮಕ ಸ್ವರೂಪಕ್ಕೆ ಹೆಚ್ಚಿನ ಮೆರಗು ತುಂಬುತ್ತವೆ. ಈ ಕಲೆಯಲ್ಲಿ ಗಮನಾರ್ಹವಾದ ಮತ್ತೊಂದು ಅಂಶವೆಂದರೆ ಜನಪದ ದಾಟಿಯ ಹಾಡುಗಳು ಹೇಳುತ್ತಾರೆ. ಸಂಗೀತದ ವಾದ್ಯವಾಗಿ ತಮಟೆ, (ತಪ್ಪಡಿ)ಯನ್ನು ಬಳಸುತ್ತಾರೆ. ಜಾತ್ರೆ ಸನ್ನಿವೇಶದಲ್ಲಿ ಹಬ್ಬಹರಿದಿನಗಳಲ್ಲಿ ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿಯು ಪ್ರಚಲಿತದಲ್ಲಿರುವ ಈ ಕಲೆಯು ಸುಗ್ಗಿಯ ಕಾಲದಲ್ಲಿ ಪ್ರದರ್ಶನಗೊಳ್ಳುತ್ತವೆ. ಶ್ರೀಮರುಕುಂಟ್ಲೇಶ್ವರ ದೇವರ ಜಾತ್ರೆಯಲ್ಲಿ ವಿಶೇಷವಾಗಿ ಮಂಗಳವಾರ ಮತ್ತು ಬುಧುವಾರ ಪ್ರದರ್ಶನಗೊಳ್ಳತ್ತದೆ.

## ಭಜನೆ

ಭಜನೆಯು ಸಹ ಒಂದು ಕಲೆ ಎಂದು ಹೇಳುವುದರಲ್ಲಿ ತಪ್ಪಿಲ್ಲ. ಏಕೆಂದರೆ ಪೂರ್ವಕಾಲದಿಂದಲೂ ಪ್ರಚಲಿತವಾಗಿರುವ ಈ ಒಂದು ಕಲೆ ಇಂದಿನವರೆಗೆ ಕಂಡು ಬರುತ್ತದೆ. ಇದು ಊರಿನಲ್ಲಿ ಸಂತೋಷದ ಸನ್ನಿವೇಶಕ್ಕೆ ಮತ್ತು ಮಳೆ ಬಾರದೇ ಇರುವ ಕಾರಣಕ್ಕೆ ಮನಸೋತವರನ್ನು ಪ್ರೇರಣೆ ನೀಡುವುದಕ್ಕೆ ಈ ಕಲೆಯು ಪೂರ್ವದಿಂದ ಬಳಕೆಯಲ್ಲಿದೆ. ೧೨ನೇ ಶತಮಾನದಿಂದ ಅಂದರೆ ಅಲ್ಲಮನು ತಬಲದ ಸಂಗೀತಕ್ಕೆ ಮಾಯೆ ಮನಸೋತಳು. ಈ ಒಂದು ಕಲೆಯಿಂದ ಎಂದು ಹೇಳಬಹುದು. ಅದೇ ರೀತಿ ೧೪ನೇ ಶತಮಾನದಲ್ಲಿ ಪುರಂದರದಾಸರು, ಕನಕದಾಸರು, ಹರಿಹರ ಮುಂತಾದವರು ತಮ್ಮದೇ ಆದ ರೀತಿಯಲ್ಲಿ ಭಜನೆ ಪದಗಳನ್ನು ಹಾಡಿರುವುದನ್ನು ಕಾಣಬಹುದು. ಪುರಂದರದಾಸರು, ಮತ್ತು ಕನಕದಾಸರ ಪದಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಈ ಒಂದು ಕಲೆಯನ್ನು ಶ್ರೀಮರುಕುಂಟ್ಲೇಶ್ವರ ದೇವರ ಜಾತ್ರೆಯಲ್ಲಿ ವಿಶೇಷವಾಗಿ ನಾಲ್ಕು ದಿನಗಳ ಕಾಲ, ಹಗಲು ರಾತ್ರಿ ಒಬ್ಬರಿಗೊಬ್ಬರು ಸ್ಪರ್ಧೆಗೆ ಇಳಿದು ಹಾಡುಗಳನ್ನು ಹಾಡುತ್ತಾರೆ. ಈ ಕಲಾ ತಂಡಗಳಲ್ಲಿ ಸುತ್ತಲೂರಿನವರೂ ಸೇರಿರುತ್ತಾರೆ. ಈ ಭಜನೆಯ ಪದಗಳು ಶಿವಶರಣರ ನಡೆಯನ್ನು ಅದೇ ಜೀವನದ ಧಾರ್ಮಿಕ ಚಿತ್ರವನ್ನು ಪ್ರತಿಬಿಂಬಿಸುತ್ತವೆ.

ಈ ಧಾರ್ಮಿಕ ಚಿತ್ರಣದ ಮೂಲಕ ತತ್ವಪದಕಾರ ತನ್ನ ಜೀವನ ಅನುಭವಗಳನ್ನು ಹೇಳುತ್ತಾ ಜನರಿಗೆ ಸಾರುತ್ತ ಮುಂದೆ ಸಾಗುವರು. ಈ ತತ್ವಪದಗಳೇ ಭಜನೆ ಪದಗಳಾಗಿ ರೂಪುಗೊಂಡಿರುತ್ತವೆ. ೧೪ನೇ ಶತಮಾನದಲ್ಲಿ ಪುರಂದರದಾಸರು, ಮತ್ತು ಕನಕದಾಸರ ಕೀರ್ತನೆಗಳು ಸಹ ಕಂಡುಬರುತ್ತವೆ.

ಉದಾಹರಣೆಗೆ

೧. ವ್ಯಾಸರಾಯನ ಕೈಯಾಗ ಹೊಯಿತ್ತು

ಬ್ರಹ್ಮಕಪಿಲ ಮುಳಿಗ ಹೊಯ್ತು

ತ್ರಿಪುರ ಸುಟ್ಟು ಭಸ್ಮವಾಯಿತು.

ವೇದ ತಿಳಿದು ನೋಡು ಎಂದಿತೊ ||

೨. ಅಲ್ಲಿ ಇಲ್ಲಿಎಲ್ಲಿ ಹುಡುಕಿದರೇ

ಕಾಣಲಿಲ್ಲ ದೇವರು |

ಕುಲ್ಲು ಪ್ರತಿಮೆಗೆ ಕೈ ಮುಗಿದರೆ

ಕಾಣಲಿಲ್ಲ ದೇವರು |

ಎಡೆಯಾನಾಕಿ ಕಾಯಿ ಒಡೆದರೆ

ಊಣುವನಲ್ಲ ದೇವರು |

ಹಣದ ಕಾಸು ಮುಡಿಪು

ಕೊಟ್ಟರೇ ಮುಡಿವಲ್ಲ ದೇವರು |

ಕಂಚು ಘಂಟೆ ಹೊಡೆದು ಕೂಗಿದರೂ

ಕಿವುಡನಲ್ಲ ದೇವರು...|

ಈ ರೀತಿಯಾಗಿ ಭಜನೆಪದಗಳನ್ನು ಕೀರ್ತನಕಾರರು ತಮ್ಮ ಅನುಭವವನ್ನು ಸಮಾಜಕ್ಕೆ ಸಾರುತ್ತ ನೀತಿಬೋಧನೆಯನ್ನು ಮಾಡಿ ಹಾಡುತ್ತಿದ್ದರು.

### ೫.೨.೨. ಗಂಗೆಪೂಜೆ

ಗಂಗೆ ಪೂಜೆಯು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ, ಪ್ರಾಚೀನ ಕಾಲದಲ್ಲಿ ದ್ರಾವಿಡರು ಮತ್ತು ಆರ್ಯ ಜನಾಂಗದವರ ಸಂಸ್ಕೃತಿಯು ವೈಭವ ಪೂರ್ಣತೆಯನ್ನು ಮೆರೆದ ಜನಾಂಗ. ದ್ರಾವಿಡರು ಮೂರನೇಯವರಾಗಿ ಭಾರತವನ್ನು ಪ್ರವೇಶಿಸಿದರೂ. ಹೆಚ್ಚು ವ್ಯವಸ್ಥಿತೆಯ ಜೀವನವನ್ನು ನಡೆಸಿದರು ಅವರುವಾಯುಪೂಜಾ, ನಿಸರ್ಗಪೂಜೆ, ಮತ್ತು ಗಂಗೆ ಪೂಜೆಯನ್ನು ಮಾಡುವರು. ಅವರಲ್ಲಿ ಸಂಪ್ರದಾಯ ಮತ್ತು ಆಚಾರ ವಿಚಾರಗಳನ್ನು ಕ್ರಮಬದ್ಧವಾಗಿ ಮುಂದುವರೆಸುತ್ತಾ ಬಂದರು. ಪ್ರಸ್ತುತ ಅಧ್ಯಯನದ ಕೇಂದ್ರಬಿಂದುವಾದ ಶ್ರೀ ಮರುಕುಂಟ್ಲೇಶ್ವರ ದೇವರ ಗಂಗೆ ಪೂಜೆಯು ಸಹ ವಿಶೇಷವಾಗಿ ಕಂಡುಬಂದಿದೆ. ಗಂಗೆ ಪೂಜೆಗೆ ಮುನ್ನ ಎಲ್ಲಾ ಸಕಲ ಸಿದ್ಧತಾ ಕ್ರಮಗಳನ್ನು ಮೊದಲು ಮಾಡಿಕೊಳ್ಳುತ್ತಾರೆ. ಭಾನುವಾರ ಪೂಜಾರಿ ಮತ್ತು ಕೆಲವು ಭಕ್ತರು ಹಾಗೂ ತಿಮ್ಮನಹಳ್ಳಿ ಅಗ್ನಿ ಕುಂಡದ ಪೂಜಾರಿಗಳು ಪೂರ್ವನಿಯಮದಂತೆ ಉಪವಾಸ, ಭಾನುವಾರ ಸಾಯಂಕಾಲ ೪ರ ಸುಮಾರಿಗೆ ಪ್ರಾರಂಭಿಸುತ್ತಾರೆ. ಸೋಮವಾರ ಬೆಳಗ್ಗೆ ೯ರ

ಸುಮಾರಿಗೆ ದೇವರ ಗುಡಿಯಿಂದ ನೆರವಾಗಿ ಗಂಗೆ ಪೂಜೆಗೆ ಹುರಡಿಹಳ್ಳಿ ರಂಗಯ್ಯನ ದುರ್ಗದ ಕೆರೆಗೆ ಹೋಗುತ್ತಾರೆ. ಆ ದೇವರ ಜೊತೆಯಲ್ಲಿ ಎಲ್ಲಾ ಜಾತಿಯ ಭಕ್ತರು, ಆಯಾ ಕಾರ್ಯಗಳಿಗೆ ನೇಮಿಸಿರುವವರು ದೇವರ ಹಿಂದೆ ಇರುತ್ತಾರೆ. ದೇವರು ಪೂಜೆಗೆ ಹೊರಟಾಗ ಪ್ರತಿಯೊಂದು ಊರಿನ ಭಕ್ತರ ದೇವರಿಗೆ (ಉರುಳು ಸೇವೆ) ಅಡ್ಡ ಬೀಳುತ್ತಾರೆ. ಪ್ರತಿ ಊರಿನ ಬುಡ್ಡೆಕಲ್ಲಿನ ಹತ್ತಿರ ಎಳೆ ಕುರಿ ಮರಿಯನ್ನು ಬಲಿಕೊಡುತ್ತಾರೆ. ಮಡಿವಾಳರ ತಿಪ್ಪಯ್ಯನ ಮಡಿಬಟ್ಟೆಯನ್ನು ದೇವರ ಕಾಲುಗಳಿಗೆ ಪ್ರತಿ ಊರುಬಂದಾಗ ಹಾಕುತ್ತಾನೆ. ಇತ್ತ ಹರಿಜನರು ದೇವರ ಪೂಜಾರಿಯ ಕಾಲುಗಳಿಗೆ ಹೊಸ ಚಪ್ಪಲಿಗಳನ್ನು ಸ್ವ ಕೈಯಿಂದ ಮಾಡಿಹಾಕುತ್ತಾರೆ. ದೇವರ ಹಿಂದೆ ಇಡೀ ಊರಿನ ಗ್ರಾಮಸ್ಥರು ಹೊರಟಿರುತ್ತಾರೆ. ಸಜ್ಜೆರೊಟ್ಟಿಯನ್ನು ಕಟ್ಟಿಕೊಂಡು ಸಣ್ಣವರು ದೊಡ್ಡವರು ಮಹಿಳೆಯರು ಮತ್ತು ಪುರುಷರು ದೇವರ ಹಿಂದೆ ಗಂಗೆ ಪೂಜೆಗೆ ಹೋಗುತ್ತವೆ. ದೇವರ ಜೊತೆಯಲ್ಲಿ ದನಗಳು ಸಹ ಪೂಜೆಗೆ ಹೋಗುತ್ತಾರೆ. ರಂಗಯ್ಯನದುರ್ಗದಕೆರೆಯಲ್ಲಿ ದೇವರ ಪ್ರತಿಯೊಂದು ವಸ್ತುಗಳನ್ನು ಬಿಚ್ಚಿ ಎಲ್ಲಾ ರೀತಿಯಿಂದ ಶುದ್ಧಗೊಳಿಸಿ ಪೂಜೆ ಮಾಡುತ್ತಾರೆ. ತದ ನಂತರ ದೇವರು ಬರುವಾಗಲೂ ಸಹ ಜನರುಭಕ್ತಿಯಿಂದ ದೇವರ ಪಾದಗಳಿಗೆ ಅಡ್ಡಬೀಳುತ್ತಾರೆ. ಅಲ್ಲಿಂದ ಮಾರ್ಗ ಬದಲಾಯಿಸಿ ಸುಂಕನ ಹಳ್ಳಿ, ಗಡ್ಡದ ಬೋರಯ್ಯನಹಟ್ಟಿ, ಮಾರಮ್ಮನಹಳ್ಳಿ, ತಿಮ್ಮನಹಳ್ಳಿ, ಮತ್ತು ಎಕ್ಕೆ ಗೊಂದಿಗೆ ಬಂದು ಸೇರುತ್ತಾರೆ. ಅಂದರೆ ಮೊದಲು ದೇವರು ಶಿವಗಂಗೆಯಿಂದ ಎಕ್ಕೆಗೊಂದಿಗೆ ನೆಲೆಸಿರುವುದರಿಂದ ಇಡೀ ರಾತ್ರಿಯೆಲ್ಲಾ ಜಂಗಮರು, ಲಿಂಗಾಯಿತ್ತರು ವಿಶೇಷವಾಗಿ ಪೂಜಾ ಕ್ರಮವನ್ನು ಮಾಡುತ್ತಾರೆ. ತಿಮ್ಮಾರೆಡ್ಡಿಯು ದೇವರ ಹಿಂದೆ ಚಾಮರ ಬೀಸುತ್ತಾ ಇರುತ್ತಾನೆ. ದೊಡ್ಡ ಮುಂಜಾನೆ ೩ ಗಂಟೆಗೆ ಹೊಸ ಪೌಳಿಯನ್ನು ಸೇರಿಸುತ್ತಾರೆ. ಅಲ್ಲಿಂದ ೫ ಗಂಟೆಗೆ ದಲಿತ ಸಮುದಾಯದವರು ಅಗ್ನಿಕುಂಡವನ್ನು ಮಾಡುತ್ತಾರೆ.

### ೫.೨. ಅಗ್ನಿಕೊಂಡ

ಆಚರಣೆಗೆ ಸಂಬಂಧಿಸಿದಂತೆ ಪ್ರಾದೇಶಿಕವಾದ ವ್ಯತ್ಯಾಸಗಳು ಎಷ್ಟೇ ಕಂಡುಬಂದರೂ ಅಗ್ನಿಕೊಂಡದ ಸಂಪ್ರದಾಯದಲ್ಲಿ ಕೆಲವು ಅಂಶಗಳನ್ನು ಇದ್ದೇ ಇರುತ್ತವೆ. ಶ್ರೀ ಮರುಕುಂಟ್ಲೇಶ್ವರ ದೇವರಿಗೆ ಅಗ್ನಿಕೊಂಡ ಪೂರ್ವದಿಂದಲೂ ನಡೆದು ಬಂದ ಆಚರಣೆ ಇದರ ಎಲ್ಲಾ ಕೆಲಸವನ್ನು ತಿಮ್ಮನಹಳ್ಳಿಯ ದಲಿತ ಜನಾಂಗ, ಮಾದಿಗ ಜನಾಂಗದವರು ಮಾಡುವರು. ಈ ಸಂಪ್ರದಾಯವನ್ನು ತಮ್ಮ ಊರಿನಲ್ಲಿ ಯಾರು ಮಾಡುವುದಿಲ್ಲವೊ ಅವರಿಗೆ ಯಾವುದಾದರೊಂದು ತೊಂದರೆಯಾಗುತ್ತದೆ ಎಂದು ಹಿರಿಯ ಯಜಮಾನರು ತಿಳಿಸುತ್ತಾರೆ.

ಈ ಅಗ್ನಿ ಕುಂಡ ತಿಮ್ಮನಹಳ್ಳಿಯ ಹರಿಜನರು (ಮಾದಿಗರು), ಜಾತ್ರೆ ಇನ್ನು ನಾಲ್ಕು ದಿನ ಇರುವಾಗಲೇ ಎಲ್ಲರ ಮನೆಯಲ್ಲಿ ಉಪವಾಸದಿಂದ ಸ್ನಾನ ಮಾಡಿ ಒಂದು ಮನೆಯ ಎರಡು ಜನರಂತೆ ಪ್ರತಿಯೊಂದು ಮನೆಯವರು ಅಡವಿಗೆ (ಅರಣ್ಯಕ್ಕೆ) ಹೋಗಿ ತುಗ್ಗಲಿಯ ಕಟ್ಟಿಗೆಯನ್ನುಕಾಲಿನಿಂದ

ತುಳಿಯದೇ ಬರೀ ಕೈಯಿಂದ ಮುರಿದುಕೊಂಡು ತಲೆಯ ಮೇಲೆ ಹೊತ್ತುಕೊಂಡು ಬರುತ್ತಾರೆ. ಸುಮಾರು ೫-೬ ಕಿ.ಮೀ.ನಷ್ಟು ಬಂದು ಎರ್ರಮಲ್ಲಯ್ಯನ ಗಡ್ಡೆಯಲ್ಲಿ ಸಾಲಾಗಿ ಕಟ್ಟಿಗೆಯ ಹೊರೆಯನ್ನು ಇಟ್ಟಿರುತ್ತಾರೆ. ಅವರು ಮುಂದೆ ದೇವರು ಗಂಗೆ ಪೂಜೆಗೆ ಹೋಗುವ ದಿನ ಅಂದರೆ ಸೋಮವಾರವು ಆ ಕಟ್ಟಿಗೆಯ ಹೊರೆಯನ್ನು ದಿಬ್ಬದ ಹಳ್ಳಿಯಲ್ಲಿ ನಡೆಯುವ ಜಾತ್ರೆಯ ಸ್ಥಳಕ್ಕೆ ತಲೆಯಿಂದ ಹೊತ್ತು ತರುತ್ತಾರೆ. ಮತ್ತು ಕೆಲವರು ದೇವರಿಗೆ ಬೆಳಕಾಗಲು ಗರಿಕಟ್ಟಿಗೆ ತರುತ್ತಾರೆ. ಅವು ಕಕ್ಕೆ ಕಟ್ಟಿಗೆ ಮಾತ್ರ ಬಳಸುತ್ತಾರೆ. ದೇವರಿಗೆ ಸೋಮವಾರ ದೊಡ್ಡ ಮುಂಜಾನೆ ಗಂಟೆಗೆ ಊರಿನಿಂದ ೧೦೧ ಆರತಿಗಳನ್ನು ಯುವತಿಯರು ಮುತ್ತೈದೆ ಅಂದರೆ ೫ ಗಂಟೆಗೆ ತಿಮ್ಮನಹಳ್ಳಿ ಹೆಣ್ಣುಮಕ್ಕಳು ಕಳಸ ಹಿಡಿಯುತ್ತಾರೆ. ಅಲ್ಲಿಕಳಸ ಬಂದ ನಂತರ ಇತ್ತ ಅಗ್ನಿ ಕುಂಡ ಪ್ರಾರಂಭವಾಗುತ್ತದೆ. ಅಂದರೆ ಅಗ್ನಿ ಕುಂಡಕ್ಕೆ ಪೂಜಾರಿಯು ಕಟ್ಟಿಗೆಯನ್ನು ಮೊದಲು ಕೈಯಿಂದ ಮುರಿದು ಪ್ರಾರಂಭಿಸುತ್ತಾನೆ. ನಂತರ ಎಲ್ಲಾ ಭಕ್ತರು ಅಷ್ಟು ಕಟ್ಟಿಗೆಯನ್ನು ಕೇವಲ ಕೈಯಿಂದ ೨೦ ಅಥವಾ ಮೂವತ್ತು ನಿಮಿಷಕ್ಕೆ ಮುರಿಯುತ್ತಾರೆ. ನಂತರ ಪೂಜಾರಿಯು ದೇವರ ಎದುರುಗಡೆಗೆ ಅಗ್ನಿಯನ್ನು ತಂದು ಕೆಂಡಮಾಡುತ್ತಾನೆ. ಅಲ್ಲಿ ಜನರು ಆ ಕೆಂಡಕ್ಕೆ ಸುಮಾರು ೫೦-೧೦೦ ಮೀಟರಿನಷ್ಟು ಹಿಂದೆ ಸರಿಯುತ್ತಾರೆ. ಆದರೆ ಭಕ್ತರಿಗೆ ಯಾವುದೇ ರೀತಿಯ ಜಳಬಡಿಯುವುದಿಲ್ಲ. ಆ ಕೆಂಡವನ್ನು ಸುಮಾರು ೩೦ರಿಂದ ೪೦ ಮೀಟರಿನಷ್ಟು ಎತ್ತರಕ್ಕೆ ಹೋದಾಗ ದೇವರು ಆಕಾಶದಿಂದ ಬೆಳ್ಳನೆಯ ಬೆತ್ತಲೆಯ ಸೂರ್ಯನನ್ನು ನುಂಗುವುದಕ್ಕೆ ಬರುತ್ತಾನೆ. ಅಗ್ನಿಯನ್ನು ಕಂಡು ಇದು ಬೆಂಕಿ ಎಂದು ಹಿಂದೆ ಸರಿಯುತ್ತಾನೆ. ಆಕಾಶ ಮಾರ್ಗದಿಂದ ಬರುವಾಗ ದೇವರ ಪೂಜಾರಿಗಳು ಮತ್ತು ಊರಿನ ಕೆಲವು ಗ್ರಾಮಸ್ಥರು ದೇವರಿಗೆ ೧೬ ಹಗ್ಗಗಳನ್ನು ಕಟ್ಟಿಕೊಂಡು ಜಗ್ಗಿಡಿಯುತ್ತಾರೆ. ದೇವರ ಕಾಲಿನಲ್ಲೇ ಇದ್ದ ಅಗ್ನಿ ಕುಂಡದ ಭಕ್ತರಿಗೆ ಇದುವರೆಗೂ ಯಾವುದೇ ರೀತಿಯ ಆಪತ್ತು ಕಂಡುಬಂದಿಲ್ಲ. ನಂತರ ಅಗ್ನಿಕೊಂಡದ ಭಕ್ತರು ಸೇರಿ ೫ ಅಥವಾ ೧೦ ನಿಮಿಷದಲ್ಲಿ ಅಗ್ನಿಕೊಂಡವನ್ನು ಮುಚ್ಚುತ್ತಾರೆ. ಆ ಸಂದರ್ಭದಲ್ಲಿ ಯಾರೇ ಆ ಕೆಂಡಕ್ಕೆ ಒಂದು ಹಿಡಿ ಮಣ್ಣು ಹಾಕಿದರೆ, ಅವರನ್ನು ಹಿಡಿದು ಅಗ್ನಿನಿಗೆ ಹಾಕಿ ಮುಚ್ಚುವ ಪದ್ಧತಿಯು ಈಗಾಲು ಮುಂದುವರಿದಿದೆ. ನಿಜವಾಗಿಯು ಹರಿಜನರ ಸೇವೆ ಮಹತ್ವದಾಗಿದೆ. ಯಾರು ದೇವರಲ್ಲಿ ನಂಬಿಕೆ ಇಲ್ಲವೂ ಅಂತವರಿಗೆ ಅಗ್ನಿಯು ನಿಜರೂಪದಲ್ಲಿ ಮೈ ಮೇಲೆ ಬೀಳುತ್ತದೆ. ಮತ್ತು ಅವರಿಗೆ ಬಹಳ ಬೆಂಕಿಯ ಜಳ ಬಡಿಯುತ್ತದೆ. ಭಕ್ತಿಯಿಂದ ಇದ್ದವರಿಗೆ ಮಾತ್ರ ಕೆಂಡದ ಮೇಲೆ ಬಿದ್ದರೂ, ಬೆಂಕಿಯು ಸುಡುವುದಿಲ್ಲ. ಈ ಸಂದರ್ಭದಲ್ಲಿ ಕುಡುಕರು, ಇನ್ನಿತರ ಕಾರ್ಯಕ್ಕೆಒಳಗಾದವರು ಬಂದರೆ ಕೆಲವೇ ಕ್ಷಣದಲ್ಲಿ ತೊಂದರೆ ಕಂಡು ಬರುತ್ತದೆ. ಈ ಅಗ್ನಿಕುಂಡಕ್ಕೆ ತಿಮ್ಮನಹಳ್ಳಿ ಪೂಜಾರಿಗಳು ಮತ್ತು ಮನೆಯವರು ಬಾಗಿಲುಗಳನ್ನು ಹಾಕಿಕೊಂಡು ಬಂದು ಕೆಂಡ ಮಾಡುತ್ತಾರೆ. ಇದುವರೆಗೂ ಊರಿನಲ್ಲಿ ಅಥವಾ ಮನೆಯಲ್ಲಿಯು ಯಾವುದೇ ಅಹಿತಕರ ಘಟನೆಗಳು ನಡೆದಿಲ್ಲ. ಒಂದು ಸಂದರ್ಭದಲ್ಲಿ ಇಂತಹ ಘಟನೆಗಳು ನಡೆದರೆ (ಕಳ್ಳರು) ಅವರು ಬೆಗಾಗುವವರೆಗೆ ಮನೆಯ ಮುಂದೆ ಕಣ್ಣುಕಾಣದೇ ಕಲ್ಲಿನಂತೆ ನಿಲ್ಲುತ್ತಾರೆ. ಈ ಆಚರಣೆಯನ್ನು ಶ್ರೀಮರುಕುಂಟ್ಲೇಶ್ವರ ದೇವರು ಜಾತ್ರೆಯ ಸಂದರ್ಭದಲ್ಲಿ ಆಚರಿಸುತ್ತಾರೆ.

### ೩. ಎತ್ತುಗಳ ಓಟಗಳು

ಶ್ರೀಮರುಕುಂಟ್ಲೇಶ್ವ ದೇವರ ಎತ್ತುಗಳು (ದನಗಳ) ಮೊದಲನೇ ಪೂಜೆಯಾಗಿರುತ್ತದೆ. ಏಕೆಂದರೆ ಮೂಲದಲ್ಲಿ ನೆಲೆಸಿದ ಸಂದರ್ಭದಲ್ಲಿ ಮೂರ್ತಿಗಿಂತ ಮೊದಲು ಬೆತ್ತ ಮತ್ತು ಆಕಳು ಎಂದು ಹೇಳಬಹುದು. ಈ ಪವಾಡಗಳಿಂದ ಜನರ ಭಕ್ತಿಯಿಂದ ದೇವರು ದನಗಳನ್ನು ವಿಶಿಷ್ಟ ರೀತಿಯಲ್ಲಿ ಪೂಜೆ ಮಾಡುತ್ತಾ ಬಂದಿದ್ದಾರೆ. ಎತ್ತುಗಳ ಓಟಗಳನ್ನು ವರ್ಷದಲ್ಲಿ ಮೂರು ಬಾರಿ ಆಚರಿಸುತ್ತಾರೆ. (ಓಡಿಸುತ್ತಾರೆ). ಮೊದಲನೆಯದು ಶ್ರಾವಣಮಾಸದಲ್ಲಿ ದೇವರನ್ನು ಪೂಜೆ ಮಾಡಿ ಹೊಸ ಪೌಳಿಗೆ ತರುತ್ತಾರೆ. ಅಲ್ಲಿ ಎಲ್ಲಾ ರೀತಿಯ ಸಂಗೀತದ ವಾದ್ಯಗಳಾದ ಉರುಮೆ, ತಪ್ಪಡಿ, ಮತ್ತು ಶಂಕ, ಜಾಗಟೆ, ಸೌಡುಕೀ, ಈ ವಾದ್ಯಗಳಿಂದ ನೂರಾರು ಜನ ಭಕ್ತರು ಸೇರುತ್ತಾರೆ. ಇದು ಮಂಗಳವಾರ ನೆರವೇರಿಸುತ್ತಾರೆ. ಇಲ್ಲಿ ಸಹ ಮೊದಲು ಗೂಳಿಯನ್ನು ವಿಶೇಷ ರೀತಿಯಲ್ಲಿ ಅಲಂಕರಿಸಿ ಓಡಿಸಿದ ನಂತರ ದನಗಳನ್ನು ಮೂರು ಸಾರಿ ಓಡಿಸುತ್ತಾರೆ. ನಂತರ ಅಲ್ಲಿಗೆ ಬಂದ ಎಲ್ಲಾ ಭಕ್ತರು ದೇವರ ಪ್ರಸಾದವನ್ನು ಸ್ವೀಕರಿಸುತಾರೆ. ೨ನೇ ಸಲವೂ ಗೌರಿಹಬ್ಬದಲ್ಲಿ ವಿಭಿನ್ನ ರೀತಿಯಲ್ಲಿ ಆಚರಿಸುತ್ತಾರೆ. ಅಲ್ಲಿ ಸಂಪ್ರದಾಯದ ಮೂಲಕ ಗುರು ಹಿರಿಯರು ಮತ್ತು ಊರಿನ ಗ್ರಾಮಸ್ಥರು ಸುತ್ತೂರಿನ ಮುಖ್ಯಸ್ಥರು ಸೇರಿ, ಮತ್ತು ಆರ್ಥಿಕವಾಗಿ ದೇವರ ಹೊಣೆ ಹೊತ್ತ ತಿಮ್ಮಾರಡ್ಡಿಯರು ಸೇರಿ ವಿಭಿನ್ನ ಶೈಲಿಯಲ್ಲಿ ಗೌರಿ ಹಬ್ಬದಲ್ಲಿ ನೆರವೇರಿಸುತ್ತಾರೆ. ಆ ಸಂದರ್ಭದಲ್ಲಿ ಊರಿನಲ್ಲಿ ಸುಗ್ಗಿಯ ಕಾಲಬಂದಿರುತ್ತದೆ. ದೇವರಿಗೆ ಸಂಡೂರ ಕುಮಾರ ಸ್ವಾಮಿಯ ಬೆಟ್ಟಕ್ಕೆ ಹೋಗಿ ಬಿದಿರು ಕಡಿದು ತಂದು ಉಪವಾಸದಿಂದ ಹೊಸ ಪೌಳಿಯನ್ನು ಕಟ್ಟುತ್ತಾರೆ. ಭಕ್ತಯಿಂದ ಗ್ರಾಮಸ್ಥರು ಅಗ್ನಿ ಕುಂಡದ ಪೂಜಾರಿಗಳು ಸೇರಿ ದೇವರ ದನಗಳನ್ನು ಓಡಿಸುತ್ತಾರೆ. ಮಂಗಳವಾರ ದೇವರುಹೊಸ ಪೌಳಿಗೆ ಬರುತ್ತದೆ. ನಿಷ್ಟ ಸಾವಿರಾರು ಭಕ್ತರು ಸೇರುತ್ತಾರೆ ಮೊದಲು ಗೂಳಿಯನ್ನು ಓಡಿಸಿ ನಂತರ ಮೂರು ಬಾರಿ ದನಗಳನ್ನು ಓಡಿಸುತ್ತಾರೆ. ಆಮೇಲೆ ಎಲ್ಲಾ ಭಕ್ತರು ಪ್ರಸಾದವನ್ನು ಸ್ವೀಕರಿಸುತ್ತಾರೆ. ಮತ್ತೆ ೩ನೇ ಸಲ ದೇವರ ಜಾತ್ರೆಯಲ್ಲಿ ಆಚರಿಸುತ್ತಾರೆ. ಮಂಗಳವಾರ ಮಧ್ಯಾಹ್ನದ ನಂತರ ಎಲ್ಲಾ ದನಗಳನ್ನು ಒಂದುಗೂಡಿಸಿ (ಬಸವ) ಗೂಳಿಗೆ ಗಗ್ಗರಿ, ಗೆಜ್ಜೆ, ಹಣಸು, ಮುಂತಾದ ವಸ್ತ್ರಗಳಿಂದ ಅಲಂಕಾರ ಮಾಡಿ ಮೂರು ಬಾರಿ ಅಗ್ನಿ ಕುಂಡಕ್ಕೆ ಮತ್ತು ದೇವರ ಪೌಳಿಗೆ ಓಡಿಸುತ್ತಾರೆ. ದನಗಳನ್ನು ೩ ಅಥವಾ ೪ ಗಂಟೆಗೆ ಎಲ್ಲವು ಒಟ್ಟಿಗೆ ಸೇರಿಸಿಕೊಂಡು ಓಡಿಸುತ್ತಾರೆ. ಕ್ರಮಬದ್ಧವಾದ ಪೂಜೆ ಉಪವಾಸ ಮತ್ತು ಯಾರಾದರೂ ಹೊಸ ಗೂಳಿ ಅಥವಾ ದನವನ್ನು ಬಿಡುವುದು ಈ ಕಾರ್ಯಕ್ರಮದಲ್ಲಿ ನೀಯತ್ತಿನಿಂದ ಜರುಗುತ್ತದೆ.

### ೫.೨.೪. ಪವಾಡಗಳು ಮತ್ತು ನಂಬಿಕೆ

ಶ್ರೀ ಮರುಕುಂಟ್ಲೇಶ್ವರ ದೇವರ ಭಕ್ತರು ಪೂರ್ವಕಾಲದಿಂದಲೂ ಇಂದಿನ ಆಧುನಿಕ ಯುಗದವರೆಗೂ ಅನೇಕ ರೀತಿಯ ಪವಾಡಗಳನ್ನು ಭಕ್ತರ ಕಣ್ಣುಸೆಳೆದಿದೆ.

ನಮಗೆ ಸಾಧ್ಯವಾಗದ ಯಾವುದೇ ಕೆಲಸ ಕಾರ್ಯಗಳು ಮತ್ತೊಬ್ಬರಿಂದ ನಿರ್ಭಯವಾಗಿ ಅಷ್ಟೇ ಸಹಜ ರೀತಿಯಲ್ಲಿ ನಡೆದಾಗ ಅದನ್ನು ಕಣ್‌ಕಟ್ ಅಥವಾ ಮಾಯಾಮಂತ್ರವೆಂದು ಮತ್ತು ವಿಶೇಷವಾದ ಪವಾಡ ಎಂದು ಕರೆಯುತ್ತಾರೆ. ಇದು ಭ್ರಮೆ ಆಗಿರಬಹುದು ಇದು ಸಣ್ಣ ರೀತಿಯಿಂದಲೂ ಹಾಗೂ ದೊಡ್ಡ ರೀತಿಯಿಂದಲೂ ನೋಡಿದರೆ ಮನುಷ್ಯನು ಸಹಜವಾದ ರೀತಿಯಿಂದ ಮನಸ್ಸು ಪ್ರತಿಫಲಿಸುತ್ತದೆ. ಉದಾಹರಣೆಗೆ: ದೇವರ ಭಕ್ತರು ದೇವರ ಮುಂದೆ ಆವೇಶದಿಂದ ಚಾಟಿಯಿಂದ ಮೈಯಲ್ಲಿ ಬಡಿದುಕೊಳ್ಳುವುದು ಕತ್ತಿಯಿಂದ ಕೈಗೆ ಚುಚ್ಚಿಕೊಳ್ಳುವುದು ನಾಲಿಗೆ ಮತ್ತು ತುಟಿಗಳಿಗೆ ಕತ್ತಿಯನ್ನು ಚುಚ್ಚಿಕೊಳ್ಳುತ್ತಾನೆ. ಮೈಲಾರಲಿಂಗನ ಭಕ್ತರು ಭಕ್ತಿಯ ಮೈಮರೆತು ಕಾಲಿಗೆ ಮಳೆ ಹೊಡೆದುಕೊಳ್ಳುತ್ತಾರೆ. ಜೋಗತಿಯರು ತಲೆಯ ಮೇಲೆ ಯಾವುದೇ ಆಧಾರವಿಲ್ಲದೇ ತುಂಬಿದ ಕೊಡವನ್ನು ಇಟ್ಟುಕೊಂಡಿರುತ್ತಾರೆ. ಹೀಗೆ ದೇವರ ಭಕ್ತಿಯಿಂದ ತಲ್ಲೀನವಾದಗ ಬಾಹ್ಯ ಜಗತ್ತನ್ನು ಸಂಪೂರ್ಣ ಮೈಮರೆತು ಅಸಾಧ್ಯವಾದುದನ್ನು ಸಾಧಿಸುವುದರ ಮೂಲಕ ಆಶ್ಚರ್ಯಕರವಾದ ಕೆಲವು ಪವಾಡಗಳು ನಡೆಯಲ್ಪಡುತ್ತವೆ. ಯಾವುದೇ ಜನಪದ ದೈವಗಳು ಪ್ರಸಿದ್ಧಿಯನ್ನು ಪಡೆದಿರುವುದು ಅಲ್ಲಿ ಕಂಡು ಬಂದಿರುವ ವಿಶಿಷ್ಟವಾದ ಪವಾಡಗಳಿಂದ ಒಂದೊಂದು ದೈವಕ್ಕೆ ಬಂದೊಂದು ರೀತಿಯ ಪವಾಡಗಳನ್ನು ಜಾತ್ರೆಯ ಸಂದರ್ಭದಲ್ಲಿ ಮಾಡುವುದನ್ನು ನಾವು ಇಂದಿಗೂ ಕಾಣಬಹುದು. ಈ ಪವಾಡಗಳು ವಿಶಿಷ್ಟವಾದ ಜನಸಮಾನ್ಯರ ಆಚರಣೆಗಳಾಗಿವೆ ಇದೇ ರೀತಿಯಲ್ಲಿ ಶ್ರೀ ಮರುಕುಂಟ್ಲೇಶ್ವದೇವರ ಪವಾಡ ಜನರ ಕಣ್ಣಿಗೆ ಕಣ್ಣಾರೇ ಕಂಡುಬರುತ್ತದೆ. ದೇವರು ಇರುವ ಸ್ಥಳದಲ್ಲಿ ಕೋಳಿ ಹಂದಿಗಳು ಬಂದರೆ ಕೆಲವೇ ಕ್ಷಣಾರ್ದದಲ್ಲಿ ಅವು ನಾಶವಾಗುತ್ತವೆ. ಮಳೆ ಬರದೇ ಇದ್ದಾಗ ಊರಿಗೆ ಯಾವುದೇ ರೀತಿ ಬರಗಾಲ ಕ್ಷೇಮ ಬಂದಾಗ ದೇವರಲ್ಲಿ ಭಕ್ತಾದಿಗಳು ಹೋಗಿ ಪೂಜೆಮಾಡಿ ಮನಸ್ಸಿನಲ್ಲಿ ನೆನಪಿಸಿಕೊಂಡರೆ ಒಂದೆರೆಡು ದಿನದಲ್ಲಿ ಮಳೆಬರುತ್ತದೆ. ಊರಿಗೆ ಯಾವುದೇ ಮಾರಕ ರೋಗ ಬಂದರೆ ದೇವರ ತೀರ್ಥದ ನೀರು ಕುಡಿದರೆ ರೋಗ ಮಾಯವಾಗಿ ಗುಣವಾಗುತ್ತದೆ.

**ನಂಬಿಕೆಗಳು**

ನಮ್ಮ ಭೌತಿಕ ಜಗತ್ತು ವಿವಿಧ ರೀತಿಯ ವಸ್ತುಗಳಿಂದ ಆಗಿದೆ. ಈ ವಸ್ತುಗಳ ಸೃಷ್ಠಿಗೆ ಮೂಲ ಕೆಲವೇ ಮೂಲ ವಸ್ತುಗಳು, ವಿಜ್ಞಾನವನ್ನು ಅಧ್ಯಯನ ಮಾಡುವಾಗ ಈ ಮೂಲವಸ್ತುಗಳು ಮೂಲ ಆಧಾರವಾಗುತ್ತವೆ. ಈ ಮೂಲ ವಸ್ತುಗಳು ಇಲ್ಲದಿದ್ದರೆ ಭೌತಿಕ ಜಗತ್ತು ಕುಸಿದು ಬೀಳುತ್ತದೆ. ಇದೇ ರೀತಿಯಲ್ಲಿ ಸಮಾಜ ಆರಂಭವಾಗುತ್ತದೆ. ಈ ಬದುಕುವ ನಂಬಿಕೆ ಬಂದ ಮೇಲೆ ಮನುಷ್ಯ ತನ್ನ ಬದುಕಿಗೆ ಬೇಕಾದ ಇತರೆ ಪರಿಕರಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಮಾನವ ಸಮಾಜದ ಅಸ್ತಿತ್ವಕ್ಕೆ ನಂಬಿಕೆ ಮೂಲ ವಸ್ತು. ಈ ನಂಬಿಕೆಯನ್ನು ಆಧಾರವಾಗಿಟ್ಟುಕೊಂಡು ಮಾನವ ಸಮಾಜದ ಇತರ ಅಂಶಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ನಂಬಿಕೆಯಲ್ಲಿ ಒಳ್ಳೆಯದು ಕೆಟ್ಟದ್ದು ಎನ್ನುವ ಆಲೋಚನೆ ಚಾರಿತ್ರಿಕ ಪರಿಣಾಮ ಬಾಳಿಗೊಂದು ನಂಬಿಕೆ ಬೇಕು ಎನ್ನುವ ಅಂಶ ಯಾವಾಗಲೂ ಸ್ಪಷ್ಟ. ನಂಬಿಕೆಗಳ ಹುಟ್ಟು

ಮತ್ತು ಸಾವನ್ನು ತೀರ್ಮಾನಿಸುವುದು ಕಾಲ. ಒಂಟಿ ಮನುಷ್ಯನಲ್ಲಿ ಆಧುನಿಕವಾಗಿ ಒಂಟಿಯಾಗುತ್ತಿರುವ ಮನುಷ್ಯ ತನ್ನ ಮನಸ್ಸಿನಲ್ಲಿ ಛಿದ್ರಗೊಳಿಸುವ ಮನುಷ್ಯ ನಂಬಿಕೆಗಳನ್ನು ಛಿದ್ರಗೊಳಿಸುತ್ತಿದ್ದಾನೆ. ನಂಬಿಕೆಗಳು ಜನತೆಯ ಜೀವನವನ್ನು ನೇರವಾಗಿ ಚಿತ್ರಿಸುತ್ತವೆ. ಹಾಗಾಗಿ ಜೀವನಕ್ಕೂ ನಿಕಟವಾದ ಸಂಬಂಧವಿದ್ದು. ಅವೆರೆಡೂ ಹಾಸು ಹೊಕ್ಕಾಗಿ ಸೇರಿಕೊಂಡಿವೆ. ನಂಬಿಕೆಗಳು ಮಾನವ ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ವ್ಯಾಪಿಸಿವೆ. ಜಾತಿ, ವೃತ್ತಿ ಅಂತಸ್ತುಗಳ ಭೇದವಿಲ್ಲದೆ ಎಲ್ಲರ ಜೀವನದಲ್ಲಿ ಸೇರಿಕೊಂಡಿವೆ. ದಿನ ನಿತ್ಯದ ಬಳಕೆಯಲ್ಲಿ ನಂಬಿಕೆ ಹಲವಾರು ಬಗೆಯ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಇದು ಹೆಚ್ಚು ಪ್ರಚಾರದಲ್ಲಿರುವ ಪದವಾದ್ದರಿಂದಲೇ ವೈಜ್ಞಾನಿಕ ವಿವರಣೆಯಲ್ಲಿ ಅಸ್ಪಷ್ಟತೆ, ಸಂದಿಗ್ಧತೆಗಳು ಎದುರಾಗುತ್ತವೆ. ನಂಬಿಕೆ ಎಂಬ ಪದವು ಮೂಢನಂಬಿಕೆ, ಅಭಿಪ್ರಾಯ, ಸಂಪ್ರದಾಯ, ಪರಂಪರೆ, ತೀರ್ಮಾನ, ಪರಿಕಲ್ಪನೆ, ತತ್ವ ಸಿದ್ಧಾಂತ, ವಿಶ್ವಾಸ ಈ ಎಲ್ಲಾ ಅರ್ಥಗಳಲ್ಲೂ ಒಂದಲ್ಲ ಒಂದು ಬಾರಿ ಬಳಕೆಯಾಗುತ್ತದೆ. "ನಂಬಿಕೆಗಳು ಯಾವುದೋ ಒಂದು ಅವ್ಯಕ್ತ ಭಯ ಅಥವಾ ಆತಂಕವನ್ನು ಸೂಚಿಸುತ್ತವೆ. ಆದ್ದರಿಂದ ಇವು ಮಾನಸಿಕ ಸ್ಥಿತಿಗೆ ಸಂಬಂಧಿಸಿದಂಥವು. ಯಾವುದೇ ವಿಷಯವನ್ನು ಕುರಿತು ಪರಿಮಿತ ತಿಳುವಳಿಕೆ ಬಹುತೇಕ ನಂಬಿಕೆಗಳ ಹುಟ್ಟಿಗೆ ಕಾರಣ. ಪ್ರಾಚೀನ ಮಾನವನ ಪರಿಮಿತ ತಿಳುವಳಿಕೆಯೇ ನಂಬಿಕೆಗಳಿಗೆ ಮೂಲ. ವಸ್ತು ಸ್ಥಿತಿಯೊಡನೆ ಅಸಂಬದ್ಧ ಅವೈಜ್ಞಾನಿಕ ಸಂಬಂಧವನ್ನು ಕಲ್ಪಿಸಿದಾಗ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ತಪ್ಪು ತಿಳುವಳಿಕೆ ಮತ್ತು ಅಜ್ಞಾನದಿಂದ ನಂಬಿಕೆಗಳು ಜನ್ಮತಾಳುತ್ತವೆ" ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೬] ನಂಬಿಕೆ ನಂಬಿಕೆಗಳ ಹಿನ್ನೆಲೆಯಲ್ಲಿ ಆಯಾ ಸಂಸ್ಕೃತಿಯ ದಟ್ಟ ಪ್ರಭಾವ ಇರುತ್ತದೆ. ಹೆಣ್ಣಿಗೆ ಎಡಗಣ್ಣು ಅದುರಿದರೆ ಶುಭ, ದೇವರು ಬಲಕ್ಕೆ ಹೂ ಕೊಟ್ಟರೆ ಅಂದುಕೊಂಡ ಕೆಲಸದಲ್ಲಿ ಯಶಸ್ಸು ನಿಶ್ಚಿತ ಶುಕ್ರವಾರ ಬಳೆ ಒಡೆಯಬಾರದು. ಅಥವಾ ಕುಂಕುಮ ಚೆಲ್ಲಬಾರದು. ಇವು ಭಾರತೀಯ ಸಂಸ್ಕೃತಿಯಲ್ಲಿ ಕಂಡುಬಂದಿವೆ. ಪ್ರಾಚೀನ ಮಾನವ ಸಂಸ್ಕೃತಿಗಳಲ್ಲಿ ವಿಶಿಷ್ಟವಾದ ನಂಬಿಕೆಗಳಿದ್ದವು. ಮಾಟ, ಮಂತ್ರ, ದೆವ್ವ, ಬೂತ, ಶಾಪ, ಭವಿಷ್ಯವಾಣಿ ಹಣೆಬರಹ ಮುಂತಾದವುಗಳಿಗೆ ಸಂಬಂಧಿಸಿದ ನಂಬಿಕೆಗಳು ಪ್ರಾಚೀನ ಮಾನವ ಸಂಸ್ಕೃತಿಯಲ್ಲಿ ರೂಪುಗೊಂಡು ಈ ಕಾಲದವರೆಗೆ ಮುಂದುವರಿದುಕೊಂಡು ಬಂದಿವೆ. ನಾಗರೀಕತೆಯ ಬೆಳವಣಿಯೊಂದಿಗೆ ಎಷ್ಟು ನಂಬಿಕೆಗಳು ಅರ್ಥ ಕಳೆದುಕೊಂಡಿವೆ. ಆದರೂ ಕೆಲವು ನಂಬಿಕೆಗಳು ಈಗಲೂ ಜೀವಂತವಾಗಿವೆ. ನಂಬಿಕೆಯು ನೆಚ್ಚಿನ ಒಂದು ಮಾನಸಿಕ ಸ್ಥಿತಿ ಇದು ಸಂಪ್ರದಾಯಿಕ ಅಂಗೀಕೃತವಾದ ಒಂದು ಪರಿಕಲ್ಪನೆಯಾಗಿದ್ದು, ಸಾಮಾನ್ಯವಾಗಿ ಅದು ಕಾರಣ ಮತ್ತು ಪರಿಣಾಮದ ಸಂಬಂಧವನ್ನು ಹಾಗೂ ಭೂತ, ವರ್ತಮಾನದ ಮತ್ತು ಭವಿಷ್ಯತ್ತಿನ ಸಂಗತಿಗಳನ್ನು ಒಳಗೊಂಡಿರುತ್ತದೆ. ಮನಸ್ಸು ಅನುಭವಗಳ ಮೂಲಕ ಬೆಳೆಯುತ್ತಾ ಹಲವಾರು ನಂಬಿಕೆಗಳನ್ನು ಸಂಪಾದಿಸಿಕೊಳ್ಳುತ್ತಾ ಅವುಗಳಿಗೆ ಲೌಕಿಕವಾಗಿ ಅಲೌಕಿಕವಾಗಿ ಒಂದು ವ್ಯವಸ್ಥಿತ ರೂಪ ಕೊಡುತ್ತಾ ಹೋಗುತ್ತವೆ. ಒಂದು ರೀತಿಯ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳಿರುತ್ತವೆ. ಪ್ರತಿಯೊಂದು ಕೆಲಸ ಕಾರ್ಯ ಆಲೋಚನೆ, ಸಂಪ್ರದಾಯ, ರೂಢಿ ಜೀವನ ಕ್ರಮಗಳೆಲ್ಲವೂ ನಂಬಿಕೆಗಳಿಂದ ಆಧಾರ ಪಡೆದಿವೆ.

**ನಂಬಿಕೆ ನಿರೂಪಣೆ**

ನಂಬಿಕೆ ಎನ್ನುವ ಪದವನ್ನು ವಿದ್ವಾಂಸರು ವಿವರಿಸಿದಾಗ ಕೆಲವು ವಿವರಣೆಗಳನ್ನು ಮನುಷ್ಯನ ಮಾನಸಿಕ ಪರಿಣಾಮಗಳನ್ನು ಗುರುತಿಸಿದರೆ ಮತ್ತೇ ಕೆಲವು ಬೌದ್ಧಿಕತೆಗೆ ಒತ್ತು ಕೊಟ್ಟಿವೆ. ಇನ್ನು ಕೆಲವು ವಿವರಣೆಗಳು ಮನುಷ್ಯನ ಗ್ರಹಿಕೆಯ ಶಕ್ತಿಗೆ ಒತ್ತುಕೊಟ್ಟಿವೆ. ಬೇರೆ ಬೇರೆ ರೀತಿಯಲ್ಲಿ ನಂಬಿಕೆಯನ್ನು ವಿವರಿಸಿದ್ದಾರೆ. ಈ ಕೆಳಗಿನಂತೆ ನೋಡಬಹುದು.

**ಹ್ಯೂಮ್**

ಮನುಷ್ಯನಿಗೆ ವಿಚಾರ ಮಾಡುವ ಶಕ್ತಿ ಇದ್ದುದರಿಂದ ಅವನು ಹೊಸ ಹೊಸ ಕಲ್ಪನೆಗಳನ್ನು ಹೆಣೆಯುತ್ತಾನೆ. ಭಾವನೆಗಳನ್ನು ಹೊಸೆಯುತ್ತಾನೆ. ಅವು ಆತನ ಭಾಷೆ ಅಭಿವ್ಯಕ್ತಿಗೊಂಡಾಗ ಸಹಜವಾಗಿ ಹೊರಬೀಳುತ್ತದೆ. ಇಂಥ ವಿಶಿಷ್ಟ ರೀತಿಯ ಭಾವನೆಗಳೇ ನಂಬಿಕೆಗಳು.

**ಕನ್ನಡ ವಿಶ್ವಕೋಶದ ಪ್ರಕಾರ**

ಸಾಮಾನ್ಯವಾಗಿ ಯಾವುದಾದರು ಪ್ರಮೇಯ ಹೇಳಿಕೆ ಅಥವಾ ಸತ್ಯಾಂಶವನ್ನು ನಿಜವೆಂದು ಭಾವಿಸಿ ಸ್ವೀಕರಿಸುವುದು ನಂಬಿಕೆ. ಇದು ವ್ಯಕ್ತಿ ಅಥವಾ ತತ್ವದ ಸ್ವೀಕಾರಕ್ಕೂ ಅನ್ವಯಿಸುತ್ತದೆ.

**ಅಲೆನ್‌ವಾಟ್ಸ್:** ನಂಬಿಕೆಯು ಒಂದು ಆಸಕ್ತಿ, ಅದು ಸತ್ಯಕ್ಕೆ ತನ್ನನ್ನು ಸಮರ್ಪಿಸಿಕೊಳ್ಳುವ ಅಧೀನಗೊಳಿಸುವ ಶ್ರದ್ಧೆಗೆ ವಿರೋಧವಾದುದು.

**ಪಿ.ಜಿ.ಸುಬ್ಬರಾಯ:** ನಂಬಿಕೆಯೆಂಬುದು, ಮನುಷ್ಯನ ಸದುದ್ದೇಶದಿಂದ ತನ್ನ ಮಾನವೀಯ ಮೌಲ್ಯಗಳೊಂದಿಗೆ ಸ್ವ ಇಚ್ಛೆಯಿಂದ ನಡೆಸುವ ಆತ್ಮಶೋಧ ಹಾಗೂ ಒಂದು ಜೂಜಾಟ ಎಂದು ಹೇಳಿದ್ದಾನೆ.

**ರಾಗೌ ಮತ್ತು ವಸಂತ ಕುಮಾರ ಎಂ.ಸಿ:** ನಂಬಿಕೆ ಅಥವಾ ನೆಚ್ಚಿಕೆಯ ಒಂದು ಮಾನಸಿಕ ಸ್ಥಿತಿ, ಪರಂಪರಾಗತವಾಗಿ ಸ್ವೀಕೃತವಾದ ಒಂದು ಭಾವರೂಪ, ಪುನರಾವರ್ತಿತ ಹಾಗೂ ಸಂಪ್ರದಾಯಿಕ ಅಭಿಪ್ರಾಯೋಕ್ತಿ, ವಸ್ತು ಸ್ಥಿತಿಯೊಡನೆ ಅವೈಜ್ಞಾನಿಕ ಆದ ಸಂಬಂಧವುಳ್ಳ ಹೇಳಿಕೆ, ಇದರಲ್ಲಿ ಮಾತು ಒಂದು ಭಾಗ, ಕ್ರಿಯೆ ಮತ್ತೊಂದು ಭಾಗ ಇವುಗಳು ಅವರ ವಿಚಿತ್ರಮಯ ಜೀವನಕ್ಕೆ ಬರೆದಿಟ್ಟ ಸುಚಿತ್ರಶಾಸನಗಳಾಗಿವೆ.

**According to Stondard Dictionary of Floklore, My thogy and legend Voll:-**

"Traditionally accepted concept, often of a cause and effect relationaship present or fufure, accepted as a result all repeated and collective observation or finolly of faith"[೮]

ಈ ಮೇಲಿನ ವಿವರಣೆಗಳನ್ನು ಗಮನಿಸಿದಾಗ ಮೊದಲನೆಯದಾಗಿ ನಂಬಿಕೆ ಮಾನಸಿಕ ಒಪ್ಪಿಗೆಯಾಗಿದೆ. ಅದನ್ನು ಪರಂಪರಾನುಗತವಾಗಿ ನಂಬಿ ಅದರಂತೆ ನಡೆದುಕೊಂಡು ಬಂದಿರುವ ಭಾವರೂಪ ಇದು.

ಸೂಚನೆ, ಆ ದೇಶ ನಿರ್ದೇಶನ, ಆಗ್ರಹ ಮತ್ತು ನಿಷೇಧ ರೂಪದ ಒಂದು ಹೇಳಿಕೆ. ನಂಬಿಕೆಗಳಿಂದ ಕ್ರಿಯೆಗಳಿಂದ ಜನರು ಒಬ್ಬರಿಂದ ಇನ್ನೊಬ್ಬರನ್ನು ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಕೇಳಿ ನಡೆಯಲ್ಲಿ ತಂದರು, ಅದನ್ನು ಮುಂದಿನವರು. ಮತ್ತೊಬ್ಬರು ಅವುಗಳನ್ನು ಕಣ್ಣಾರೆ ಕಂಡು ಸುಖದ ಆಸೆ ತಾಳಿಯೇ ಮನಸ್ಸಿನ ಸಮಾಧಾನಕ್ಕೆ ಅನುಸರಿಸಿದರು. ಉದಾಹರಣೆಗೆ ಶ್ರೀಮರುಕುಂಟ್ಲೇಶ್ವರ ದೇವರ ಗ್ರಾಮಗಳಲ್ಲಿ ಅಥವಾ ಪೂಜಾರಿಯ ವಂಶಸ್ಥರಲ್ಲಿ ಇಂದಿಗೂ ಗಂಡು ಮಕ್ಕಳನ್ನು ಚನ್ನಪ್ಪ ಪಾಲಯ್ಯ ಎಂದು ನಾಮಕರಣ ಮಾಡುತ್ತಾರೆ. ಏಕೆಂದರೆ ಅದು ಪೂರ್ವ ಕಾಲದಿಂದಲೂ ನಡೆದು ಬಂದ ಪದ್ಧತಿಯಾಗಿದೆ. ಆ ದೇವರಿಗೆ ಬಿಟ್ಟ ಗೂಳಿ (ಹೋರಿ) ಯಾರ ಹೊಲದಲ್ಲಾದರೂ ಮೇಯಬಹುದು. ಆಹಾರ ತಿನ್ನಬಹುದು. ಅದನ್ನು ಯಾರು ಒಡೆಯಬಾರದು ಎಂಬನಂಬಿಕೆ. ಒಂದು ಪಕ್ಷದಲ್ಲಿ ಗೂಳಿಯನ್ನು ಅಥವಾ ದೇವರ ದನಗಳನ್ನು ಒಡೆದರೆ ಅವರಿಗೆ ಆ ವರ್ಷವು ಬೆಳೆಯಾಗುವುದಿಲ್ಲ, ಮನೆಯಲ್ಲಿನಾನಾ ರೀತಿಯ ತೊಂದರೆಗಳು ಕಂಡುಬಂದಿವೆ. ಮತ್ತೆ ಗೂಳಿಯನ್ನು ಕಟ್ಟಿಹಾಕಿದರೆ ಅವರು ಮೂರೇದಿನದಲ್ಲಿ ತೀರಿಹೋಗುತ್ತಾರೆ. ಇಲ್ಲ ವಾಂತಿ ಭೇದಿ ಹಿಡಿದು ಜೀವನದಲ್ಲಿ ನರಳಲು ಪ್ರಾರಂಭಿಸುತ್ತಾನೆ.

ದೇವರ ವಾರದ ದಿನದೊಂದು ಮನೆಯನ್ನು ಸುಚಿಗೊಳಿಸುತ್ತಿದ್ದರೆ ಅಂದು ಮನೆಯಲ್ಲಿ ವಿಷಜಂತುಗಳ ಕಾದಾಟವು ಜಾಸ್ತಿಯಾಗಿರುತ್ತವೆ. ಇದಂದ ಜನರು ಇಂದು ನಾವು ವಾರ ತಪ್ಪಿದರಿಂದ ನಮಗೆ ಈ ಕಾಟ ಎಂದು ತಿಳಿಯುತ್ತಾರೆ. ನಂತರ ಒಂದು ಮುಡಿಪನ್ನು ಅರ್ಪಿಸುತ್ತಾರೆ. ಚಿಕ್ಕ ಮಕ್ಕಳಿಗೆ ಜ್ವರ ಬಂದು ಚಿಂತಾಜನಕವಾದಾಗ ಅಂತಹ ಸಂದರ್ಭದಲ್ಲಿ ಆ ಮಗುವನ್ನು ದೇವರು ಗುಡಿಯಲ್ಲಿ ಪೂಜೆ ಮಾಡಿಸಿ ಮೂರು ಸುತ್ತು ತಿರುಗಿ ಪ್ರದಕ್ಷಿಣೆ ಮಾಡಿಸಿ ನಂತರ ಹುಷಾರಾದರೆ ನಿನಗೆ ಬೆಳ್ಳಿ ಲಿಂಗ ಮಾಡಿಕೊಡುತ್ತೇನೆ ಎಂದು ಮುಡುಪು ಕಟ್ಟಿಸಿಕೊಂಡು ಹೋಗುವುದು. ಮಗನ ವಿದ್ಯಾಭ್ಯಾಸಕ್ಕೆ ದೂರದ ಊರಿನಲ್ಲಿ ಮಾಡಿಸುವಂತಹ ಸಂದರ್ಭದಲ್ಲಿ ಮಗುವನ್ನು ಕಳುಹಿಸಿಕೊಡುವಾಗ ದೇವಸ್ಥಾನಕ್ಕೆ ಹೋಗಿ ನಮಸ್ಕಾರ ಮಾಡಿಸಿ ಪೂಜಾರಿಯಿಂದ ದೇವರ ಭಂಡಾರವನ್ನು ಒಂದು ಪೇಪರ್‌ನಲ್ಲಿಟ್ಟು ಅದನ್ನು ಬಿಳಿ ಬಟ್ಟೆಯಲ್ಲಿ ಕಟ್ಟಿ ಉಡುದಾರ ಅಥವಾ ತೋಳಿನಲ್ಲಿ ಕಟ್ಟುವುದು. ಇದರ ಉದ್ದೇಶ ಪ್ರಯಾಣ ಮಾಡುವಾಗ ಅಪಘಾತಗಳು ಸಂಭವಿಸುವ ಸಂದರ್ಭದಲ್ಲಿ ನನ್ನ ಮಗನಿಗೆ ಏನೂ ಆಗಬಾರದೆಂಬ ನಂಬಿಕೆ, ವ್ಯಾವಸಾಯದಲ್ಲಿ ಮಳೆ ಬಂದಾಗ ಬಿತ್ತನೆ ಮಾಡುವ ದೇವರಿಗೆ ಬೀಜ ಹಾಕಿ ದೇವರ ಭಂಡಾರವನ್ನು ತಂದು ಬೀಜದಲ್ಲಿ ಬೆರೆಸುವುದು, ಇದರ ಉದ್ದೇಶ ನಮ್ಮ ಬೆಳೆ ಚೆನ್ನಾಗಿ ಬರಲಿ ಎಂಬ ನಂಬಿಕೆ. ಊರುಗಳಲ್ಲಿ ಮಳೆಬರದೇ ಇರುವ ಸಂದರ್ಭದಲ್ಲಿ ಊರಿನ ಜನರು ಸೇರಿ ದೇವರ ಪೂಜೆ ಮಾಡಿ ಊರ ಸುತ್ತಮುತ್ತ ೧೦೧ ಕೊಡ ನೀರು ಹಾಕಿಸಿ, ನಂತರ ಎಲ್ಲರು ಸೇರಿ ರಾತ್ರಿಯೆಲ್ಲ ಭಜನೆ ಮಾಡುತ್ತಾರೆ. ಹೆಣ್ಣು ಮಕ್ಕಳಿಗೆ ಮಕ್ಕಳು ಆಗದೇ ಇರುವ ಸಮಯದಲ್ಲಿ ದೇವರ ಪೂಜೆ ಮಾಡಿದರೆ ನಿನಗೆ ಮಕ್ಕಳು ಆಗುತ್ತವೆ ಎಂಬ ನಂಬಿಕೆ. ಒಟ್ಟಾರೆಯಾಗಿ ಶ್ರೀಮರುಕುಂಟ್ಲೇಶ್ವರ ದೇವರ ಮೇಲೆ ಜನರು ಅಪಾರವಾದ

ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ. ಅದೇ ರೀತಿಯು ಭಕ್ತರು ಅಂದುಕೊಂಡ ಕೆಲಸವು ಸಹ ನೆರವೇರುತ್ತಾ ಬಂದಿವೆ. ಆದ್ದರಿಂದ ಈ ದೇವರ ಮೇಲೆ ನಂಬಿಕೆಯನ್ನು ಊರಿನ ಗ್ರಾಮಸ್ಥರು, ಅಪಾರವಾಗಿ ಇಟ್ಟುಕೊಂಡಿದ್ದಾರೆ. ಇವು ಅಲ್ಲದೆ ವಾಸ್ತವಿಕ ಜೀವನದಲ್ಲಿ ಇನ್ನೂ ಅನೇಕ ರೀತಿಯ ನಂಬಿಕೆಯನ್ನೂ ಇಟ್ಟುಕೊಂಡಿದ್ದಾರೆ. ಬೆಕ್ಕಿನ ಹಸಿ ಮಾಂಸವನ್ನು ತಿಂದರೆ ರೋಗ ಗುಣವಾಗುತ್ತದೆಂಬ ಹದಿನಾರನೆಯ ಶತಮಾನದಲ್ಲಿ ಜನರು ನಂಬಿಕೆಯಾಗಿತ್ತು. ಜೇಬಿನಲ್ಲಿ ಬೆಳ್ಳುಳ್ಳಿ ಒಯ್ದರೆ ಖಾಯಿಲೆಗಳು ಹತ್ತಿರ ಸುಳಿಯುವುದಿಲ್ಲ ಎಡಮಗ್ಗುಲಲ್ಲಿ ಮಲಗಿದರೆ ಆಯುಷ್ಯ ಹೆಚ್ಚುತ್ತದೆ. ಬಲಮಗ್ಗುಲಲ್ಲಿ ಮಲಗಿದರೆ ಹೃದಯ ದುರ್ಬಲವಾಗುತ್ತದೆ. ರೋಗವಿರುವಾಗ ಸತ್ತವನನ್ನು ನೆನೆದರೆ ರೋಗ ವಾಸಿಯಾಗುವುದಿಲ್ಲ, ರೋಗವಿರುವಾಗ ಹಾಸುಗೆಯ ಮೇಲೆ ಆಕಳಿಸುವುದು ಕೆಟ್ಟಶಕುನ, ಕಾಲ ಮೇಲಿನ ಗಾಯಕ್ಕೆ ಸ್ವಮೂತ್ರವೇ ಶ್ರೇಷ್ಠ ಚಿಕಿತ್ಸೆ, ಬಸುರಿಯಾದ ತಂಗಿಯನ್ನು ತವರಿಗೆ ಕರೆತರಲು ಅಣ್ಣನನ್ನು ಕಳಿಸಬಾರದು. ಒಲೆಯನ್ನು ಕಾಲಿನಿಂದ ಒದೆಯಬಾರದು, ಮೇಲು ಗಣ್ಣಿನ ಹೆಣ್ಣು ಪುಣ್ಯವಂತೆ, ಮೆಣಸಿನ ಪುಡಿಯನ್ನು ತುಳಸಿ ರಸವನ್ನು ಕಲಸಿ ಕುಡಿಸಿದರೆ ಮಲೇರಿಯಾ ವಾಸಿಯಾಗುತ್ತದೆನ್ನುವುದು ಸುಳ್ಳಲ್ಲ. ಈ ಹಲವಾರು ರೀತಿಯಲ್ಲಿ ನಂಬಿಕೆಯನ್ನು ಜನರು ಗುರುತಿಸಿಕೊಂಡು ಬಂದರು.

## ಅಡಿಟಿಪ್ಪಣಿ

೧. ಡಾ.ಪ್ರೊ.ಪಿ.ಲಿಂಗಯ್ಯ, ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸ್ವರೂಪ ಮತ್ತು ಸಾಹಿತ್ಯ, ಪುಟ-೧೮

೨. ಜೀ.ಶಂ.ಪರಮಶಿವಯ್ಯ, ಕನ್ನಡ ವಿಶ್ವಕೋಶ, ಸಂಪುಟ-೧, ಪುಟ-೭೦೩

೩. ಡಾ.ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪುಟ-೭೧

೪. ಡಾ.ಲಕ್ಷ್ಮೀದೇವಿ, ಗ್ರಾಮ ಮತ್ತು ಶಿಷ್ಟ ದೇವತೆಗಳು, ಪುಟ-೧೧೫

೫. ಡಾ.ಪ್ರೊ.ಪಿ.ಲಿಂಗಯ್ಯ, ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸ್ವರೂಪ ಮತ್ತು ಸಾಹಿತ್ಯ, ಪುಟ-೧೯-೨೦

೬. ಮೇಘನಾಥ ಎ.ಕೆ.ಎನ್, ಮರಿಸ್ವಾಮಿ ಜನಪದ ಅಧ್ಯಯನ, ಪುಟ-೭೭-೭೮

೭. ಡಾ.ಪ್ರೊ.ಪಿ.ಲಿಂಗಯ್ಯ, ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸ್ವರೂಪ ಮತ್ತು ಸಾಹಿತ್ಯ, ಪುಟ-೨೭

೮. ಡಾ.ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ಪುಟ-೩೩-೩೪

೯. ಡಾ.ದೇ.ಜವರೇಗೌಡ, ಜನಪದ ಅಧ್ಯಯನ, ಪುಟ-೩೧೫-೩೧೬

* * *

## ಅಧ್ಯಾಯ - ಆರು

# ಶ್ರೀಮರುಕುಂಟ್ಲೇಶ್ವರ ದೇವರು ಮತ್ತು ಇತರೆ ದೈವಗಳ ಸಂಬಂಧಗಳು

ಮಾನವ ಹುಟ್ಟಿದಾಗಿನಿಂದ ಅವನ ಜೊತೆಗೆ ತಾನೂ ಹುಟ್ಟಿ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿರುವ ಸಾಹಿತ್ಯ ಜಾನಪದ ಸಾಹಿತ್ಯ. ಅನಾಗರೀಕ ಅಥವಾ ಗ್ರಾಮ್ಯ ಜನಾಂಗಗಳಲ್ಲಿ ಅದಿಕಾಲದಿಂದಲೂ ಉಳಿದು ಬಂದಿರುವ ದೇವತೆಗಳನ್ನು ಜನಪದರು ದೇವತೆಗಳೆಂದು ಕರೆಯಬಹುದು ಒಂದು ಊರು ಪ್ರಾರಂಭವಾದಾಗಲೇ ಇದ್ದ ಅಥವಾ ಪ್ರಾರಂಭವಾದಾಗ ಸ್ಥಾಪಿಸಿದ ಆ ಊರಿನ ರಕ್ಷಣಾದೇವತೆ ಆದಿದೇವತೆ ಅಥವಾ ಮೂಲ ದೇವತೆಯೇ ಆ ಊರಿನ ಗ್ರಾಮದೇವತೆ.

ಗ್ರಾಮದೇವತೆಯ ಕಲ್ಪನೆ ದ್ರಾವಿಡ ಜನಾಂಗದ ಪ್ರಾರಂಭದ ಹಂತದಲ್ಲಿ ಭಾರತದಲ್ಲಿ ಆಯಿತು. ಒಕ್ಕಲುತನಕ್ಕಾಗಿ ಒಂದೆಡೆ ಸೇರಿದ ಜನಾಂಗ ತನ್ನದೇ ಆದ ರೀತಿ ನೀತಿ ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದರು. ದ್ರಾವಿಡರು, ಸರಂಜಾಮಿಗೆ ಸಂಬಂಧಿಸಿ ಸಂಸ್ಕೃತಿಯಲ್ಲೂ ಬಹುಶಃ ಭಾವಾವೇಶ ಗುಣದಲ್ಲೂ ಅದರಲ್ಲಿಯೂ ಕಲೆ ಮತ್ತು ಆಧ್ಯಾತ್ಮ ಯೋಗದ ಕ್ಷೇತ್ರದಲ್ಲಿ ಆರ್ಯರಿಗಿಂತ ದ್ರಾವಿಡರು ಶ್ರೇಷ್ಠರಾಗಿದ್ದರು. ದ್ರಾವಿಡರ ಅನುಭಾವ ಪ್ರಜ್ಞೆ ಧಾರ್ಮಿಕ ಪೂಜೆ ಮತ್ತು ದೈವರೊಡನೆ ಐಕ್ಯ ಪಡೆಯುವ ವಿಧಾನವಾದ ಅವನ ಯೋಗ ಇವೆರಡರಲ್ಲಿ ಅವರ ಅನುಭವ ಜೀವನ ತನ್ನ ಅಭಿವ್ಯಕ್ತಿಯನ್ನು ಪಡೆದಿದೆ.[1]

ದ್ರಾವಿಡರು ರೂಪಿಸಿದ ನೆಲೆಗಳಲ್ಲಿ ತನ್ನದೇ ಆದ ಗ್ರಾಮಗಳಲ್ಲಿ ಅವರು ಆಚಾರ ವಿಚಾರಗಳು ಮೊಳಕೆಯೊಡೆದು ಬೃಹದಾಕಾರವಾಗಿ ಬೆಳೆಯತೊಡಗಿತು. ಹೀಗೆ ಬೆಳೆದು ಗ್ರಾಮಗಳಲ್ಲಿ ಕಾಲಕ್ರಮೇಣ ಗ್ರಾಮದೇವತೆಗಳ ಅಸ್ತಿತ್ವವಾಯಿತು. ಗ್ರಾಮದೇವತೆಗಳ ಅಸ್ತಿತ್ವದ ಆಳದ ಶೋಧನೆಯನ್ನು ತಿಳಿಯಬೇಕಾದರೆ ದ್ರಾವಿಡ ಜನಾಂಗಗಳ ಸಂಸ್ಕೃತಿ ಅಧ್ಯಯನ ಬಹಳ ಪ್ರಮುಖವಾದ ಅಂಶವಾಗಿದೆ. ದಕ್ಷಿಣ ಭಾರತದಲ್ಲೆಲ್ಲಾ ಶಿವನನ್ನು ಬಿಟ್ಟರೆ ಇಷ್ಟು ವ್ಯಾಪಕವಾದ ಆಚರಣೆ ಬೇರೊಂದಿಲ್ಲ ಮಾತೃಪೂಜೆಯಷ್ಟು ಯಾವ

ಪುರುಷದೇವತೆಯ ಪೂಜೆಯೂ ವ್ಯಾಪಕವಾಗಿ ಆದಿ ಐತಿಹಾಸಿಕ ಭಾರತದಲ್ಲಿ ಇರಲಿಲ್ಲ. ದ್ರಾವಿಡ ಜನಾಂಗಗಳ ಸಂಸ್ಕೃತಿಯ ಅಧ್ಯಯನವನ್ನು ಕೈಗೊಳ್ಳದೇ ಗ್ರಾಮದೇವತೆಯ ಅಸ್ತಿತ್ವ ಅರಿಯಲು ಮಾತೃಪ್ರಧಾನ ಕುಟುಂಬವೇ ಕಾರಣ ಮಾತೃ ದೇವತಾ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು ಭಯ ಭಕ್ತಿ ಬೀತಿಯಿಂದ ಹುತ್ತ, ವೃಕ್ಷ, ಶಿಲೆಗಳನ್ನು ಆರಾದಿಸುತ್ತಿದ್ದ ಗ್ರಾಮೀಣರು ಒಂದು ಕಾಲಘಟ್ಟದಲ್ಲಿ ಗ್ರಾಮದೇವತೆಗಳನ್ನು ಕಂಡುಕೊಂಡರು. ಅತಿ ಪ್ರಾಚೀನವಾದ ಭೂಮಿ ಪೂಜಾ ಅಥವಾ ಮಾತೃ ಪೂಜೆಯ ಕುರುಹುಗಳಲ್ಲದೇ ಬೇರೆಯಲ್ಲ. ಕೆಲವೊಮ್ಮೆ ಅವು ಫಲಶಕ್ತಿಯ ಸ್ಪಷ್ಟ ಪ್ರತೀಕಗಳಂತೆ ಕಾಣುತ್ತವೆ. ಹೀಗೆ ಗ್ರಾಮದೇವತೆಗಳ ಉಗಮ ಇತಿಹಾಸವನ್ನು ಸ್ಪಷ್ಟಪಡಿಸಬೇಕಾದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಪರಿಣಾಮಗಳನ್ನು ಪರಿಶೀಲಿಸುವುದು ಅತಿ ಅವಶ್ಯಕವಾಗಿದೆ.[೨]

ಭಾರತದಲ್ಲಿ ಕೃಷಿ ಆರ್ಥಿಕ ಚಟುವಟಿಕೆಯಾಗಿ ರೂಪುಗೊಳ್ಳುವುದರ ಜೊತೆಗೆ ಶಾಕ್ತ ಪಂಥವು ತಲೆ ಎತ್ತಿತ್ತು. ಶಾಕ್ತ ಧರ್ಮವು ದೇವತೆಯನ್ನು ಪ್ರಪಂಚದ ಮೂಲಶಕ್ತಿಯ ಸಾಕಾರರೂಪವನ್ನಾಗಿ ಲೋಕದ ದೈವಿಕ ಮತ್ತು ಜೈವಿಕ ಬೆಳವಣಿಗೆಯ ಮೂಲ ಶಕ್ತಿಯನ್ನಾಗಿ ಪರಿಗಣಿಸುತ್ತದೆ. ಕೃಷಿಯ ಆರಂಭ ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ಗಮನಾರ್ಹವಾಗಿ ಬದಲಾವಣೆ ಮಾಡಿತಲ್ಲದೆ ಅನೇಕ ಸ್ತ್ರೀ ದೇವತೆಗಳ ಹುಟ್ಟಿಗೆ ಕಾರಣವಾಯಿತು. ಈಗಾಗಲೇ ಇದ್ದ ಸ್ತ್ರೀ ದೇವತೆಗಳು ಪ್ರವರ್ಧಮಾನಕ್ಕೆ ಬರಲು ಪೂರಕವಾಯಿತು. ಸ್ತ್ರೀಯನ್ನು ಕುರಿತು ಪೂಜ್ಯ ಭಾವನೆಯ ಜೊತೆಗೆ ಪ್ರಪಂಚದ ಎಲ್ಲಾ ದೇವರುಗಳ ಶಕ್ತಿಯಿಂದ ಸೃಷ್ಟಿಯಾದವು ಎಂಬ ನಂಬಿಕೆ ಬೆಳೆಯತೊಡಗಿತು. ಜಗದಂಬೆ, ಜಗನ್ಮಾತೆ ಈ ಪರಿಕಲ್ಪನೆಗಳು ಜನಮನದಲ್ಲಿ ಗಟ್ಟಿಯಾದವು. ಶಕ್ತಿ,[೨] ಚಿರಕನ್ಯೆಯೆಂದು ಗರ್ಭಧರಿಸದೆಯೇ ದೇವರುಗಳನ್ನು ಜನಸಮುದಾಯವನ್ನು ಸೃಷ್ಟಿಸಿದಳೆಂದು ಪುರಾಣಕಥೆಗಳು ಹುಟ್ಟಿಕೊಂಡವು. ಈ ರೀತಿಯಾಗಿ ಕೆಲವು ದೈವಗಳ ತಾರತಮ್ಯ ಇರಬಹುದು. ಇನ್ನೂ ಕೆಲವು ದೈವಗಳಲ್ಲಿ ತಾರತಮ್ಯ ಇಲ್ಲದಿರಬಹುದು.

ಸಾಮಾನ್ಯವಾಗಿ ಪ್ರತಿಯೊಂದು ಗ್ರಾಮಕ್ಕೂ ಒಂದು ಗ್ರಾಮ ದೈವವು ಇರುತ್ತದೆ ಯಾದರೂ ಗ್ರಾಮದೈವವು ಇಲ್ಲದ ಗ್ರಾಮಗಳೂ ಇವೆ. ಬಹುಪಾಲು, ಎಲ್ಲಾ ಊರುಗಳಲ್ಲೂ ಗ್ರಾಮ್ಯ ದೈವಗಳುಂಟು. ಆದರೆ ಕೆಲವು ಊರುಗಳಲ್ಲೂ ಗ್ರಾಮ ದೈವವು ಇರುವುದಿಲ್ಲ. ಹೀಗೆ ಗ್ರಾಮದೈವವು ಇರದಿರುವ ಊರುಗಳು ಸಾಪೇಕ್ಷವಾಗಿ ಇತ್ತೀಚಿನ ಹಳ್ಳಿಗಳು ಎಂದು ಊಹಿಸಲು ಅವಕಾಶವಿದೆ. ಗ್ರಾಮದೇವತೆಗಳು ಹೆಣ್ಣು ದೈವಗಳಾಗಿದ್ದರೂ ಕೆಲವು ಕಡೆ ಬಸವ, ಹನುಮ, ವೀರಭದ್ರ, ಶಿವ ಮುಂತಾದ ಗಂಡು ದೇವತೆಗಳು (ದೈವವು) ಗ್ರಾಮ ದೇವತೆಗಳೇ ಆಗಿರುವುದು. ಕೂಡ್ಲಿಗಿ ತಾಲ್ಲೂಕಿನ ಕಲವು ಹಳ್ಳಿಗಳಲ್ಲಿ ಕಾಣಬಹುದಾಗಿದೆ. ಈ ಗ್ರಾಮದೇವತೆಗಳು ಗ್ರಾಮಸಂರಕ್ಷಕ ಶಕ್ತಿಗಳು. ಅವು ರೋಗ ರುಜಿನ ಮೊದಲಾದ ಅನಿಷ್ಟಗಳು ಗ್ರಾಮವನ್ನು ಪ್ರವೇಶಿಸದಂತೆ ಕಾಯ್ದುಕೊಂಡಿರುತ್ತವೆ. ಅದಕ್ಕಾಗಿಯೇ, ಗ್ರಾಮದೇವತೆಗಳ ಗುಡಿ ಊರಿನ ಹೆಬ್ಬಾಗಿಲು ಬಳಿಯಲ್ಲೇ ಇರುತ್ತವೆ. ಪರಸ್ಥಳದಿಂದ ವಲಸೆ ಬಂದ ಕ್ರೂರ ದೇವತೆಗಳು ಗ್ರಾಮವನ್ನು ಪ್ರವೇಶಿಸಲು ಪ್ರಯತ್ನಿಸಿದಾಗ ಗ್ರಾಮದೇವರುಗಳು ಅದನ್ನು ತಡೆಯುತ್ತವೆ.

ಕರ್ನಾಟಕದ ಹೆಚ್ಚು ಕಡೆಗಳಲ್ಲಿ ಮಾರಮ್ಮ ದುರುಗಮ್ಮ, ಗ್ರಾಮ ದೇವತೆಯಾಗಿದ್ದಾಳೆ. ಮಾರಿಗೆ ಕಬ್ಬಾಳಮ್ಮ ದುರುಗಮ್ಮ. ಏಳುನಾಲಿಗೆ ದುರ್ಗಿ, ಮಲಿಯಮ್ಮ, ಮುಚ್ಚುಳದಮ್ಮ, ಎಲ್ಲಮ್ಮ, ಮುಂತಾದ ಹೆಸರುಗಳಿರುವುದನ್ನು ಗಮನಿಸಿದಾಗ ದೈವಗಳ ವ್ಯಾಪಕತೆ ಅರಿವಾಗುತ್ತದೆ.

ಗ್ರಾಮದೈವಗಳಲ್ಲಿ ಮತ್ತೊಂದು ಪ್ರಮುಖ ಅಂಶ ಬಲಿಯ ಆಚರಣೆ ಶಿಷ್ಟ ಹಾಗೂ ಗ್ರಾಮ ದೇವರನ್ನು ಪ್ರತ್ಯೇಕಗೊಳಿಸುವ ಈ ಆಚರಣೆಯಲ್ಲಿ ಸಾಮಾನ್ಯವಾಗಿ ಕುರಿ, ಮೇಕೆ, ಕೋಳಿ, ಕೋಣಗಳನ್ನು ಬಲಿಕೊಡಲಾಗುತ್ತದೆ. ಕೆಲವು ದೇವಾಲಯಗಳಲ್ಲಿ ಬಲಿಯನಂತರ ಅದನ್ನು ಪ್ರಸಾರವಾಗಿ ಭಕ್ತರಿಗೆ ವಿನಿಯೋಗಿಸಲಾಗುತ್ತದೆ. ಆದರೆ ಕೆಲವು ಸಂದರ್ಭದಲ್ಲಿ ಕೆಲವು ದೇವಾಲಯಗಳಲ್ಲಿ ಮಾಂಸಹಾರವನ್ನು ಪ್ರಸಾದವಾಗಿ ವಿನಿಯೋಗಿಸುವುದು ಕಂಡುಬರುತ್ತದೆ. ಕೂಡ್ಲಿಗಿ ತಾಲ್ಲೂಕಿನ ದಿಬ್ಬದ ಹಳ್ಳಿ, ತಿಮ್ಮನಹಳ್ಳಿ, ರಾಮಸಾಗರಹಟ್ಟಿ, ಈ ಹಳ್ಳಿಗಳಲ್ಲಿ ಮಾರಮ್ಮ, ದುರುಗಮ್ಮ, ಮಲಿಯಮ್ಮ ದೈವಗಳ ದೇವಾಲಯಗಳು ಕಂಡುಬಂದಿವೆ. ಇಲ್ಲಿ ಗ್ರಾಮದೇವರುಗಳೆಂದು ಕೆಲವು ಪೂಜಿಸುವ ಗ್ರಾಮೀಣರು ಮಾಂಸಹಾರ, ನೈವೇದ್ಯವನ್ನು ಆ ದೈವಕ್ಕೆ ಅರ್ಪಿಸುತ್ತಾರೆ. ಜೊತೆಗೆ ಅದನ್ನು ಪ್ರಸಾದದ ರೂಪದಲ್ಲಿ ಅಲ್ಲಿ ನೆರೆದ ಭಕ್ತಾದಿಗಳಿಗೆ ಹಂಚುತ್ತಾರೆ. ಈ ದೈವಗಳ ಮುಂದೆ ಬಾಯಿ ಬೀಗ, ಪ್ರದಕ್ಷಿಣಾ, ಉಟ್ಟಿಗೆ, ಈ ಆಚರಣೆಗಳು ಕೂಡ ಇದೆ ದೇವಾಲಯದಲ್ಲಿ ನೆರವೇರಿಸಲಾಗುತ್ತದೆ.[೬]

ದ್ರಾವಿಡ ಜನವರ್ಗದಲ್ಲಿ ಮೊದಲು ಕೃಷಿಕರು, ಹೊಲೆಮಾದಿಗರೇ ಆಗಿದ್ದರು. ಅವರು ಮಾತೃ ಆರಾಧಕರಾಗಿದ್ದರು. ಇಡೀ ದೇಶದಲ್ಲಿ ಮಾತೃ ಆರಾಧನೆ ಹಬ್ಬ ಹರಡಲು ಕಾರಣರಾದರು. ಒಟ್ಟಿನಲ್ಲಿ ಮಾತೃ ಪ್ರಧಾನ ವ್ಯವಸ್ಥೆಯನ್ನು ಒಳಗೊಂಡ ಕೃಷಿಕರು ಮತ್ತು ಮಾದಿಗರಲ್ಲಿ ಸ್ತ್ರೀ ಪ್ರಧಾನ ದೇವತೆಯ ಕಲ್ಪನೆಯಿದ್ದರೆ. ಪಿತೃಪ್ರಧಾನ ಒಳಗೊಂಡ ಪಶುಪಾಲಕ ವಲಸೆಗಾರರಲ್ಲಿ ಶಿಷ್ಟದೇವತೆಗಳ ಕಲ್ಪನೆ ಕಂಡು ಬರುತ್ತದೆ. ಗ್ರಾಮ ದೈವದ ಅಸ್ತಿತ್ವಕ್ಕೆ ದ್ರಾವಿಡ ಸಂಸ್ಕೃತಿಯ ಕೃಷಿಕ ಸಮಾಜ ಕಾರಣವಾದರೆ ಶಿಷ್ಟ ದೇವತೆಗಳ ಅಸ್ತಿತ್ವಕ್ಕೆ ವಲಸೆಗಾರರು ಪಶುಪಾಲಕರ ಸಮಾಜ ಕಾರಣವಾಯಿತು.

ವೈದಿಕ ಧರ್ಮದ ಜನರು ಮಾಂಸಾಹಾರವನ್ನಾಗಿ ಉಪಯೋಗಿಸುವ ಎತ್ತು, ಆಕಳು, ಪವಿತ್ರ ಪ್ರಾಣಿಗಳಾದವು. ದ್ರಾವಿಡರು ತಿನ್ನುತ್ತಿದ್ದ ಎಮ್ಮೆ ಕೋಣಗಳು ಕೀಳಾದವು. ಊರಮ್ಮ, ಮಾರಮ್ಮ, ದುರುಗಮ್ಮ ದೈವಗಳ ಜಾತ್ರೆಯಲ್ಲಿ ಅಪವಾದಾತ್ಮಕವಾಗಿ ಕೋಣ ಬಲಿವಿಧಿಯಾಚರಣೆ ರೂಪದಲ್ಲಿತ್ತು. ದ್ರಾವಿಡ ಬುಡಕಟ್ಟುಗಳಲ್ಲಿ ಎಮ್ಮೆ ಕೋಣಗಳನ್ನು ತಿನ್ನದ ಜನಾಂಗಗಳಿದ್ದವು. ಇವರ ಜಾತಿ ವ್ಯವಸ್ಥೆಯಲ್ಲಿ ಸ್ವಲ್ಪ ಮಟ್ಟಿನ ಉನ್ನತ ಸ್ಥಾನಗಳಿಸಿದರು. ಎಮ್ಮೆ ಕೋಣಗಳನ್ನು ತಿನುವ ಕೃಷಿಕರು ಕೀಳೆಂದು ಪರಿಗಣಿಸಲ್ಪಟ್ಟರು. ಹೀಗೆ ಮೂಲದಿಂದಲೂ ಶಿಷ್ಟ ದೇವತೆಗಳಾಗಿ ವಿಶ್ವ ವ್ಯಾಪಕತೆ ಇದೆ. ಆದರೆ ಗ್ರಾಮದೈವಕ್ಕೆ ಅಂತಹ ವ್ಯಾಪಕತೆ ಇಲ್ಲವಾದರೂ ಅವು ಗ್ರಾಮೀಣ ಪರಧಿಯಲ್ಲೇ ತಮ್ಮ ಅಸ್ತಿತ್ವವನ್ನು ಗಾಢವಾಗಿ ಬೆಳೆಸಿಕೊಂಡಿವೆಯಲ್ಲದೆ ಇಂದಿನ ಕಾಲದಲ್ಲೂ ಅನೇಕ ಆಚರಣೆಗಳನ್ನು ಉಳಿಸಿಕೊಂಡು ಹೋಗುತ್ತವೆ.[೭]

ದ್ರಾವಿಡರು ಅಂತರ್ಮುಖೀ ಪೂಜಾ ಪದ್ಧತಿಗೆ ಹೆಚ್ಚು ಮಹತ್ವನ್ನು ನೀಡಿದ್ದರು. ಪೂಜಾ ಎನ್ನುವ ಶಬ್ದವೇ ಮೂರ್ತಿ ದ್ರಾವಿಡಹಬ್ಬ ಪೂ+ಚೆಯ್ ಎಂದರೆ ಹೂವಿನಿಂದ ಮಾಡುವ ಕಾರ್ಯ ಎಂಬರ್ಥವನ್ನು ಹೊಂದಿದೆ. ಪ್ರಕೃತಿಯಲ್ಲಿ ಬಗೆಬಗೆಯ ಹೂಗಳಿಂದ ದ್ರಾವಿಡರು ಶಿವನಾರಾಧನೆಯನ್ನು ವೈಭಾವ ಪೂರ್ಣವಾಗಿ ನಡೆಯಿಸುತ್ತಿರಬೇಕು. ದ್ರಾವಿಡರು ಪೂಜಾ ಕಲ್ಪನೆ ಹಾಗೂ ವಿವಿಧ ವಿಧಾನವನ್ನು ಒಳಗೊಂಡು ಮಾಡುತ್ತಿದ್ದರು. ಇಡೀ ವಿಶ್ವವೇ ದೇವರ ಚೈತನ್ಯ ರೂಪದಿಂದ ತುಂಬಿದೆ. ಒಂದು ಮೂರ್ತಿ ಚಿತ್ರ ಮಡಿಕೆ, ಅಥವಾ ಕಲ್ಲಿನ ಚೂರು ಮರದ ಒಂದು ಶಾಖೆ ಮುಂತಾದ ಕೆಲವು ವಿಶೇಷ ವಸ್ತುಗಳಲ್ಲಿ ಅಪರಮ ಚೈತನ್ಯವನ್ನು, ಮಾಂತ್ರಿಕ ಪೂಜಾಚರಣೆಯಿಂದ ಆಹ್ವಾನಿಸಲಾಗುತ್ತದೆ.

ಪ್ರಾಣಿ ಪ್ರತಿಷ್ಠ ಬಂದು ಕರೆಯಲಾಗುವ ಈ ಪೂಜಾ ವಿಧಿ ನೆರವೇರಿಸಿದ ಮೇಲೆ ಸ್ಥಾಯಿ ಅಥವಾ ತಾತ್ಕಾಲಿಕವಾಗಿ ಆ ವಿಗ್ರಹವನ್ನು ಗೌರವಾನ್ವಿತ ಅತಿಥಿಯಂತೆ ಸತ್ಕರಿಸಲಾಗುವುದು. ನೀರು, ಹೂವು, ಕೆಲವು ಗಿಡಗಳ ಎಲೆಗಳು ಹಣ್ಣು ಧಾನ್ಯ ಮತ್ತು ಬೇಯಿಸಿದ ಆಹಾರವನ್ನು ಅದಕ್ಕೆ ಅರ್ಪಿಸಲಾಗುವುದು. ಸಂಗೀತ ನರ್ತನಗಳಿಂದ ಮತ್ತು ರಾಜ ಯೋಗ ವೈಭವಗಳಿಂದ ಅದನ್ನು ಕಾಣುವರು. ಈ ಸಂಕೇತದ ಮೂಲಕ ಯಾವೊಬ್ಬ ಪೂಜೆ ಮಾಡುವವನೇ ಆಗಲಿ ಅತನೂ ಸಹ ದೈವತ್ವದೊಡನೆ ಗಂಭೀರ ವೈಯುಕ್ತಿಕ ಆಧ್ಯಾತ್ಮಕ ಸಂಬಂಧವನ್ನು ಪಡೆಯಬಹುದು.[೬] ಇದೇ ರೀತಿ ಪ್ರಸ್ತುತ ಕೆ.ದಿಬ್ಬದಹಳ್ಳಿಯಲ್ಲಿ ಶ್ರೀ ಮರುಕುಂಟ್ಲೇಶ್ವರ ಗ್ರಾಮಗಳಲ್ಲಿ ದೈವವೇ ಪ್ರಧಾನ ದೈವ, ಆದರೆ ಈ ದೈವರೊಂದೆ ದೇವರಲ್ಲ ಈ ದೇವರೊಂದಿಗೆ ಇನ್ನೂ ಹಲವಾರು ದೇವರುಗಳು ಇವೆ. ಶ್ರೇಣೀಕರಣದ ದೃಷ್ಟಿಯಿಂದ ನೋಡಿದರೆ ಈ ದೈವವು ಎಲ್ಲದಕ್ಕಿಂತ ಹೆಚ್ಚು ಪೂಜೆಗೆ ಒಳಗಾಗುವ ದೇವರು. ಈ ಗ್ರಾಮಗಳಲ್ಲಿ ಕಂಡು ಬರುವ ಇತರೆ ದೇವರುಗಳೆಂದರೆ ಮಾರಮ್ಮ, ದುರುಗಮ್ಮ, ಮರಿಯಮ್ಮ, ಯರಬಾಲನಾಯ್ಕ, ಬಸವಣ್ಣ, ಹನುಮಪ್ಪ, ಹೀರಲದೇವನು ಹೊನ್ನೂರಸ್ವಾಮಿ ಮುಂತಾದ ದೈವಗಳು ದೇವಾಲಯಗಳು ಕಂಡುಬಂದಿವೆ. ಈ ದೈವಗಳನ್ನು ಗಮನಿಸಿದಾಗ ಶ್ರೀಮರುಕುಂಟ್ಲೇಶ್ವರ ದೇವರೇ ಪ್ರಧಾನ ದೈವ.

### ೬.೧. ಗ್ರಾಮದೇವತೆ ಮಾರಮ್ಮ

ಊರಿನ ಗ್ರಾಮ ದೇವತೆಯಾದ ಮಾರಮ್ಮ ಮತ್ತು ಮರುಕುಂಟ್ಲೇಶ್ವರ ದೇವರು ಒಂದಕ್ಕೊಂದು ಸಂಬಂಧವನ್ನು ಹೊಂದಿವೆ. ಹೇಗೆಂದರೆ ದೈವಗಳೆರಡು ಅಣ್ಣ, ತಂಗಿಯ ಸಂಬಂಧವನ್ನು, ಹೊಂದಿವೆ. ಈ ದೇವತೆಯ ಮಂಗಳವಾರ ಮತ್ತು ಶುಕ್ರವಾರ ಪೂಜೆಗೊಳಗಾಗುತ್ತಾಳೆ. ಶ್ರೀಮರುಕುಂಟ್ಲೇಶ್ವರ ದೈವವು ಭಾನುವಾರ ಮತ್ತು ಸೋಮವಾರ ಪೂಜೆನಡೆಯುತ್ತದೆ. ಈ ದೈವಗಳಿಗೆ ಭಕ್ತಾದಿಗಳು ಬೇರೆ ಬೇರೆ ಕಡೆಯಿಂದ ಬರುತ್ತಾರೆ. ಈ ಎರಡು ದೈವಗಳ ಗುಡಿಯು ಊರ ಮಧ್ಯದಲ್ಲಿ ಇವೆ. ಆದರೆ ಶ್ರೀಮರುಕುಂಟ್ಲೇಶ್ವರ ದೇವರ ಜಾತ್ರೆಯು ಮಾತ್ರ ಊರ ಹೊರಗಡೆ ವಿಶಾಲವಾದ ಜಾಗದಲ್ಲಿ ನೆರವೇರುತ್ತದೆ. ಈ ದೇವತೆ ಊರಿನ ಗ್ರಾಮದೇವತೆಯಾಗಿರುತ್ತಾಳೆ. ಮಾರಮ್ಮನಹಬ್ಬಕ್ಕೆ ಇಲ್ಲಿ ಬೇಡರು, ಮಾದಿಗರು, ನೇವರು ಈ ಮುಂತಾದ ಜನಾಂಗಗಳು ಕುರಿ, ಕೋಣ, ಆಡು, ಕೋಳಿ ಮುಂತಾದ ಪ್ರಾಣಿಗಳನ್ನು ಬಲಿದಾನ ಮಾಡುತ್ತಾರೆ. ಇಂತಹ ಆಚರಣೆಗಳ ಬಗ್ಗೆ ಜನರಲ್ಲಿ ನಂಬಿಕೆಯು ಬಹುಕಾಲದಿಂದ ಉಳಿದುಕೊಂಡು ಬಂದಿರುವುದು ಸತ್ಯ ಸಂಗಿತಿಯಾಗಿದೆ.

ಏಕೆಂದರೆ ಹಿಂದೆ ಒಂದು ಕಾಲದಲ್ಲಿ ಊರಿಗೆ ಪ್ಲೇಗ್, ಕ್ಷಾಮ, ಮಾರಿಕೆಗಳಂತ ಭಯಾನಕ ರೋಗಳು ಬಂದಾಗ ಈ ದೈವಗಳಿಗೆ ಪ್ರದಕ್ಷಿಣೆ ಮಾಡಿ ಅಮ್ಮನ ತಪ್ಪಲು ತಿಂದರೆ ಎಲ್ಲಾ ರೋಗಗಳು ಗುಣವಾಗುತ್ತವೆ ಎಂಬಂತಹ ನಂಬಿಕೆ ಜನರಲ್ಲಿ ಹೆಚ್ಚಾಗಿತ್ತು. ಈ ದೇವಸ್ಥಾವನ್ನು ನೋಡಲು ಸುಂದರವಾಗಿ ಕಾಣುತ್ತದೆ. ಈ ದೇವರಿಗೆ ಮೊದಲು ದೇವಸ್ಥಾನವು ಇದ್ದಿಲ್ಲ. ಒಂದು ಬೇವಿನ ಮರ ಮಾತ್ರ ಕಂಡು ಬರುತ್ತಿತ್ತು. ನಂತರದ ದಿನಗಳಲ್ಲಿ ಸರ್ಕಾರ ಮತ್ತು ಭಕ್ತರು ಕೂಡಿ ದೇಣಿಗೆ ಹಾಕಿ ದೇವಸ್ಥಾನವನ್ನು ನಿರ್ಮಾಣಮಾಡಿದರು. ಆ ಒಂದು ಬೇವಿನ ಮರದಲ್ಲಿ ಅಮವಾಸೆ, ಹುಣ್ಣಿಮೆ ದಿಗಳಲ್ಲಿ ಬೆಳಗ್ಗೆ ೪ ಗಂಟೆಯ ಸಮಯದಲ್ಲಿ ಊದಿನಕಟ್ಟಿ ಹತ್ತಿ ಉರಿದಂತೆ ಕಾಣುತಿತ್ತಂತೆ. ಇದನ್ನು ನೋಡಿದ ಪೂಜಾರಿಯು ಭಯಬೀತನಾದನು. ನಂತರ ದೇವಿಯ ಅವತಾರವೆಂದು ತಿಳಿದು ಆ ಮರಕ್ಕೆ ಪೂಜೆ ಮಾಡಿದನು.

ದೇವರ ಸ್ವರೂಪವೆಂದರೆ ಬಳಪದಕಲ್ಲಿನಲ್ಲಿ ಕೆತ್ತಿದ ವಿಗ್ರಹ, ಇದು ಇತ್ತೀಚಿನಲ್ಲಿ ಬೆಳ್ಳಿಯ ವಿಗ್ರಹವನ್ನು ಮಾಡಿದ್ದಾರೆ. ಉದ್ದವಾದ ತ್ರಿಭುಜಕಾರದಲ್ಲಿ ಕಂಡುಬಂದಿದೆ. ಶ್ರೀಮರುಕುಂಟ್ಲೇಶ್ವರ ವಿಗ್ರಹವು ಸಹ ದುಂಡು ಮುಖದಲ್ಲಿ ಬಸವೇಶ್ವರನ ರೀತಿ ಕಂಡುಬಂದಿದೆ. ಜಾತ್ರೆ, ಹಬ್ಬ, ಆಚರಣೆಯು ವರ್ಷಕ್ಕೊಮ್ಮೆ ನಡೆದರೆ ಊರಿನ ಪ್ರಮುಖರಲ್ಲರೂ ಸೇರಿ ಆಚರಿಸುತ್ತಾರೆ. ಈ ದೈವವು ಒಂದು ಸೀರೆ, ಕಬುಸ, ಮೊಸರು, ಬಾಳೇಹಣ್ಣು, ಬಳೆ, ಉಡಿಹಾಕಿ ನಂತರ ಕೋಣವನ್ನು ಬಲಿಕೊಡುತ್ತಾರೆ. ಆದರೆ ಶ್ರೀಮರುಕುಂಟ್ಲೇಶ್ವರ ದೈವಕ್ಕೆ ಪ್ರಾಣಿಬಲಿಯನ್ನು ಕೊಡುವುದಿಲ್ಲ. ಇದು ಮೊದಲಿನಿಂದಲೂ ನಡೆದು ಬಂದ ಪದ್ಧತಿ ಏಕೆಂದರೆ ಮೊದಲು ಗೋವುಗಳೇ ದೇವರ ರೂಪದಲ್ಲಿ ಕಂಡುಬಂದಿದ್ದರಿಂದ ಬಲಿಕೊಡುವುದನ್ನು ನಿಲ್ಲಿಸಿದ್ದಾರೆ. ಮಾರಮ್ಮದೇವಿಗೆ ಊರೆಲ್ಲ ದೀಪದ ಮೆರವಣಿಗೆ ಮಾಡಿಕೊಂಡು ದೇವಸ್ಥಾನದ ಮುಂಭಾಗದಲ್ಲಿ ಮಡಿಹುಟ್ಟು ಹೆಂಗಳೆಯರು ಬೀಡುಬಿಡುತ್ತಾರೆ. ಪ್ರತಿಯೊಬ್ಬರೂ ಒಂದು ದೀಪ ಅಥವಾ ತೆಂಗಿನಕಾಯಿ ಆರತಿಯನ್ನು ಮಾಡುತ್ತಾರೆ. ಆನಂತರ ದೇವರಲ್ಲಿ ವರ್ಷ ಪೂರ್ತಿ ಕುಟುಂಬದವರನ್ನೆಲ್ಲಾ ಸುಖವಾಗಿರಿಸಿದರೆ ಮುಂದಿನ ವರ್ಷ ಇದೇ ರೀತಿ ಪೂಜೆ ಸಲ್ಲಿಸುತ್ತೇವೆ ಎಂದು ಹರಕೆ ಹೊರುತ್ತಾರೆ.

ಮಂಗಳವಾರ ಸಾಯಂಕಾಲ ಗಂಗೆ ಪೂಜೆ ಮುಗಿಸಿಕೊಂಡು ಗುಡಿಯಲ್ಲಿ ಕುಳಿತುಕೊಳ್ಳುತ್ತಾಳೆ. ಬುಧುವಾರ ಬೇಟೆ ಬೇವು, ಹರಕೆ, ಉಡ್ಡಿಗೆ ಮಾಡುತ್ತಾರೆ. ಗುರುವಾರ ಹೂ ಹಣ್ಣು ಕಾಯಿ ದೇವರಿಗೆ ಅರ್ಪಿಸುತ್ತಾರೆ. ಶುಕ್ರವಾರ ದೇವರು ಗರ್ಭಗೃಹವನ್ನು ಪ್ರವೇಶಿಸುತ್ತಾಳೆ.

### ೬.೨. ದುರುಗಮ್ಮ

ಶ್ರೀ ಮರುಕುಂಟ್ಲೇಶ್ವರ ದೈವವು ಎಲ್ಲಾ ಜನಾಂಗದ ದೇವರಾದರೆ ದುರುಗಮ್ಮ ದೈವವು ಹರಿಜನರ ಪ್ರಮುಖ ದೇವತೆ. ಅದಕ್ಕಾಗಿ ಮರುಕುಂಟ್ಲೇಶ್ವರ ದೇವರು ಊರಲ್ಲಿ ಇದ್ದರೆ, ದುರುಗಮ್ಮ ದೇವತೆಯು ಕೇರಿಯಲ್ಲಿ ಇರುತ್ತಾಳೆ. ಈ ದೈವಗಳೆರಡು ಬೇರೆ ಬೇರೆ ಇದ್ದರು. ಆ ದೈವಗಳನ್ನೂ ಕಾಣುವ ಜನರ

ಸಂಬಂಧ ಬಹಳ ಹತ್ತಿರವಾಗಿದೆ. ಶ್ರೀ ಮರುಕುಂಟ್ಲೇಶ್ವರ ದೈವದ ಆಚರಣೆಗಳು ಮತ್ತು ದುರುಗಮ್ಮನ ಆಚರಣೆಗಳು ಒಂದೇ ರೀತಿಯಲ್ಲಿ ಕಂಡುಬರುತ್ತವೆ. ಅಲ್ಪಸ್ವಲ್ಪ ವ್ಯಾತ್ಯಾಸವು ಕೆಲವೊಂದು ಸಂದರ್ಭದಲ್ಲಿ ಕಂಡುಬಂದಿದೆ. ದುರುಗಮ್ಮ ದೇವರಿಗೆ ಪ್ರಾಣಿ ಬಲಿಯನ್ನು ಕೊಟ್ಟರೆ ಈ ದೈವಕ್ಕೆ ಬಲಿಕೊಡುವುದಿಲ್ಲ. ಮತ್ತು ಜಾತ್ರೆಯು ಊರು ಬಿಟ್ಟು ಹೊರ ಜಾಗದಲ್ಲಿ ನಡೆಯುತ್ತದೆ. ಈ ದೈವಗಳೆರಡು ಸಹೋದರ, ಸಹೋದರಿಯ ಸಂಬಂಧವನ್ನು ಪುರಾತನ ಕಾಲದಿಂದಲೂ ಜನರು ನಂಬಿದ್ದಾರೆ. ಶ್ರೀ ಮರುಕುಂಟ್ಲೇಶ್ವರ ದೇವರಿಗೆ ಹರಿಜನರು ಪ್ರತೀ ಸೋಮವಾರ ಪೂಜೆಗೆ ಬರುತ್ತಾರೆ. ಈ ದೇವತೆಯನ್ನು ಸಹ ಮಂಗಳವಾರ ಪೂಜೆ ಮಾಡುತ್ತಾರೆ. ಹರಿಜನರೇ ಶ್ರೀಮರುಕುಂಟ್ಲೇಶ್ವರ ದೈವದ ಅಗ್ನಿ ಕೂಂಡವನ್ನು ತಾವೇ ಸ್ವತ ಮಾಡುತ್ತಾರೆ. ಅಲ್ಲದೇ ಊರಿನ ಜನರು ಸಹ ಕೆಲವು ಸಂದರ್ಭದಲ್ಲಿ ದುರುಗಮ್ಮನ ದೇವಸ್ಥಾನಕ್ಕೆ ಹೋಗುತ್ತಾರೆ. ಈ ದೇವತೆಯ ಜಾತ್ರೆಯು ಊರಿನ ಮಧ್ಯಭಾಗದಲ್ಲಿ ನೆರೆವೇರುತ್ತದೆ. ಶ್ರೀ ಮರುಕುಂಟ್ಲೇಶ್ವರ ದೇವರ ಜಾತ್ರೆಯು ಪ್ರತಿವರ್ಷಕ್ಕೊಮ್ಮೆ ನಡೆದರೆ ದುರುಗಮ್ಮನ ಜಾತ್ರೆಯು ಮೂರು, ಅಥವಾ ಐದು, ಏಳು ವರ್ಷಗಳಿಗೊಮ್ಮೆ ನಡೆಯುತ್ತದೆ. ಈ ದೈವವು ಕೂಡ ಗಂಗೆ ಪೂಜೆಗೆ ಹೋಗುವ ಸಂದರ್ಭದಲ್ಲಿ ವಿಶೇಷ ಕಾರ್ಯಕ್ರಮಗಳ ಆಚರಣೆಗಳು ನಡೆಯುತ್ತವೆ. ಈ ದೇವತೆಯನ್ನು ಏಳುನಾಲಿಗೆಯ ದುರ್ಗಿ ಎಂದು ಕರೆಯುತ್ತಾರೆ. ಏಕೆಂದರೆ ಹಿಂದೆ ದೇವತೆಯರಿಗೆ ಮತ್ತು ಬ್ರಹ್ಮರಾಕ್ಷಸರಿಗೆ ಮಲ್ಲಯುದ್ಧ, ಜಲಯುದ್ಧ ದೃಷ್ಠಿಯುದ್ಧ ಮತ್ತು ಪೃಥ್ವಿಯುದ್ಧದ ಸಮಯದಲ್ಲಿ ರಾಕ್ಷಸರನ್ನುಕೊಂದು ನುಂಗಿದಳು. ಒಂದು ವೇಳೆ ರಾಕ್ಷಸರ ರಕ್ತ ಒಂದು ಹನಿ ನೆಲಕ್ಕೆ ಬಿದ್ದರೆ ಏಳುಕೋಟಿ ರಾಕ್ಷಸರು ಹುಟ್ಟುತ್ತಾರೆ ಎಂದು ತಿಳಿದಳು. ಅದಕ್ಕಾಗಿ ದುರುಗಮ್ಮ ಇಡೀ ಭೂಮಂಡಲದ ತುಂಬ ನಾಲಿಗೆಯನ್ನು ಚಾಚಿ ರಾಕ್ಷಸರ ರಕ್ತ ನೆಲಕ್ಕೆ ಬೀಳದೆ ಕುಡಿದಳು. ಅದಕ್ಕಾಗಿ ಏಳು ನಾಲಿಗೆಯ ದುರ್ಗಿ ಎಂದು ಕರೆಯುತ್ತಾರೆ.

ದುರುಗಮ್ಮನ ಜಾತ್ರೆಯು ಮೂರು, ಐದು, ಏಳು ವರ್ಷಕ್ಕೊಮ್ಮೆ ಮಂಗಳವಾರ ಆರಂಭವಾಗುತ್ತದೆ. ಆ ದಿನವು ಸಂಜೆ ೬ರ ಸುಮಾರಿಗೆ ಗಂಗೆ ಪೂಜೆ ಮುಗಿಸಿಕೊಂಡು ಮುಂಜಾನೆ ೫ರ ಸುಮಾರಿಗೆ ಕೋಣವನ್ನು ಬಲಿಕೊಡುತ್ತಾರೆ. ಆ ಸಂದರ್ಭದಲ್ಲಿ ದುರುಗಮ್ಮನ ಕೈಯಲ್ಲಿ ಬಳೆ, ಮತ್ತು ನತ್ತು ನೆಲಕ್ಕೆ ಬೀಳುತ್ತದೆ. ಏಕೆಂದರೆ ಕೋಣ ಮತ್ತು ದುರುಗಮ್ಮ ಸತಿಪತಿಯ ಸಂಬಂಧವನ್ನು ಹೋಂದಿವೆ ಎಂದು ಜನರು ನಂಬಿದ್ದಾರೆ. ಆ ಮೇಲೆ ಊರಿನ ಜನರು ಕುರಿ, ಆಡುಗಳನ್ನು, ಬಲಿಕೊಟ್ಟು ಹೂ ಹಣ್ಣು, ಕಾಯಿಯಿಂದ ಪೂಜೆ ಮಾಡಿಸುತ್ತಾರೆ.

ಬುಧವಾರ ಹರಕೆ ಮತ್ತು ಬೇವು ಆಚರಣೆ ನಡೆಸುತ್ತಾರೆ. ನಂತರ ಮನೋರಂಜನೆ ಕಾರ್ಯಕ್ರಮಗಳು ನಡೆಯುತ್ತವೆ. ಈ ಪದ್ಧತಿಯು ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಶ್ರೀಮರುಕುಂಟ್ಲೇಶ್ವರ ದೇವರಿಗೂ ಸಹ ಮಂಗಳವಾರ ದೇವರ ಎತ್ತುಗಳು ಪೂಜೆಗೈಯುತ್ತವೆ. ಹಾಗೂ ಮನೋರಂಜನೆ ಕಾರ್ಯಕ್ರಮಗಳು ನಡೆಯುತ್ತವೆ. ಈ ದೇವತೆಯ ಜಾತ್ರೆಯ ಸಮಯದಲ್ಲಿ ಶ್ರೀ ಮರುಕುಂಟ್ಲೇಶ್ವರ ದೇವರಿಗೆ ವಿಶೇಷ ಪೂಜೆಯನ್ನು ನೆರವೇರಿಸುತ್ತಾರೆ. ಈ ದುರುಗಮ್ಮ ದೇವರ ಅರ್ಚಕರು, ಪೂಜಾರಿಗಳು

ಹರಿಜನರೇ ಆಗಿರುತ್ತಾರೆ. ಯಾವುದೇ ಧಾರ್ಮಿಕ ಕಾರ್ಯದಲ್ಲಿ ಒಬ್ಬರ ಮೇಲೆ ಮತ್ತೊಬ್ಬರು ಅವಲಂಬಿಸುವುದಿಲ್ಲ, ಅವರವರ ಮಟ್ಟಿಗೆ ಕಾರ್ಯಗಳು ನಡೆಸುತ್ತಾರೆ. ಇದರಿಂದ ಎರಡು ದೈವಗಳು ಎಲ್ಲಾ ಜನಾಂಗಗಳನ್ನು ಧಾರ್ಮಿಕ ನೆಲೆಯಲ್ಲಿ ಒಂದುಗೂಡಿಸುವ ಅಂಶವನ್ನು ಕಾಣಬಹುದು.

### ೬.೩. ಗಾದ್ರಯ್ಯ ಮತ್ತು ಬೊಸೆದೇವರ

ಈ ದೈವಗಳು ಶ್ರೀಮರುಕುಂಟ್ಲೇಶ್ವರ ದೇವರಿಗೆ ಆಪ್ತಮಿತ್ರರು ಸ್ನೇಹಿಜೀವಿಗಳು ಬಾಲ್ಯಗೆಳೆಯರು, ಮತ್ತು ಒಬ್ಬರನ್ನು ಬಿಟ್ಟು ಒಬ್ಬರು ಇರುವುದಿಲ್ಲ. ತ್ರಿಭುಜ ರೀತಿಯಲ್ಲಿ ಒಂದೇ ನಾಣ್ಯದ ಮೂರು ಮುಖಗಳ ಮುಕ್ಕಣ ಇದ್ದಂತೆ ಈ ಸ್ನೇಹಿತರು ಸದಾ ಜೊತೆಯಲ್ಲಿ ಇರುತ್ತಾರೆ. ಏಕೆಂದರೆ ಪ್ರತಿಯೊಂದು ಸಂದರ್ಭದಲ್ಲಿ ಪ್ರತಿಯೊಂದು ಆಚರಣೆ ಮತ್ತು ಸಂಪ್ರದಾಯದ ಸಂದರ್ಭದಲ್ಲಿ ಮೂರು ದೈವಗಳು ಒಟ್ಟಾಗಿ ಇರುತ್ತವೆ. ಒಂದೇ ಮನಸ್ಸಿನ ಮೂರು ಹೃದಯಗಳಂಗೆ.

ಈ ದೈವಗಳ ಜಾತ್ರೆಯು ಪ್ರಾರಂಭದಿಂದ ಮುಗಿಯುವವರೆಗೆ ಎಲ್ಲಾ ರೀತಿಯ ಕಾರ್ಯಚಾರಣೆಯ ಜೊತೆಯಲ್ಲಿ ಇರುತ್ತವೆ. ಗಂಗೆ ಪೂಜೆ, ಹೊಸ ಪೌಳಿಗೆ ಬರುವಾಗ ಮತ್ತು ಶ್ರಾವಣಮಾಸದಲ್ಲಿ ಗೌರಿ ಹಬ್ಬದಲ್ಲಿ ವಿಶೇಷವಾಗಿ ವಿಭಿನ್ನ ರೀತಿಯಲ್ಲಿ ಸಂಪ್ರದಾಯ ಆಚರಣೆಗಳನ್ನು ಆಚರಿಸುತ್ತಾರೆ. ಅಂದರೆ ಶ್ರೀಮರುಕುಂಟ್ಲೇಶ್ವರ ದೇವರಿಗೆ ಆಪ್ತರಕ್ಷಕರು ಆಗಿರುತ್ತಾರೆ.

### ೬.೪. ಹನುಮಂತರಾಯ

ಊರು ಸುಟ್ಟರೂ ಹನುಮಪ್ಪ ಊರ ಹೊರಗೆ ಎಂಬ ಗಾದೆಯಂತೆ ಎಲ್ಲಾ ಊರುಗಳಲ್ಲಿ ಹನುಮಂತರಾಯನ ಗುಡಿ ಊರ ಹೊರಗೆ ಇರುತ್ತದೆ. ಶ್ರೀ ಮರುಕುಂಟ್ಲೇಶ್ವರ ದೇವರು ಮತ್ತು ಹನುಮಂತರಾಯನು ಇವರು ಒಂದು ರೀತಿಯಲ್ಲಿ ಅಣ್ಣ ತಮ್ಮಂದಿರ ಭಾವನೆಯ ಸಂಬಂಧವನ್ನು ಹೊಂದಿದ್ದಾರೆ. ಶ್ರೀ ಮರುಕುಂಟ್ಲೇಶ್ವರನು ಪವಾಡ ಪುರುಷನಾದರೆ ಹನುಮಪ್ಪನು ಶಕ್ತಿಪುರುಷ ಎಂದು ಕರೆಯುತ್ತಾರೆ. ಹನುಮದಿಕ್ಕಿಗೆ ಹನುಮ ಬಾಗಿಲು ಅಂದರೆ ದಕ್ಷಿಣದ ಕಡೆಗೆ ಮುಖ ಬೀರುವುದಕ್ಕೆ ಹನುಮನ ಬಾಗಿಲು ಎಂದು ಕರೆಯುವ ವಾಡಿಕೆ ಇದೆ. ಈತ ಭಗವಂತನಿಂದ ಲಿಂಗಧಾರಣೆ ಹೊಂದಿದೆ ತ್ರಿಕಾಲ ಲಿಂಗಪೂಜೆಗೆ ದೇವಲೋಕದಲ್ಲಿ ಗಾನ ಗಂಧರ್ವನೆಂಬ ಬಿರುದು ಪಡೆದಾತ. ಆಗಲೇ ಕೈಲಾಸದಲ್ಲಿ ಶಿವನಿಂದ ಒಂದು ರೋಮಕ್ಕೆ ಎರಡು ಕೋಟಿ ಶಿವಲಿಂಗಗಳು ಎನ್ನುವ ವರ ಪಡೆದಾತ. ಭೀಮ ದ್ರೌಪದಿಗೆ ಸೌಗಂಧಿಕಾ ಪುಷ್ಪ ತರಲು ಹೋಗುವಾಗ ದಾರಿಗೆ ಅಡ್ಡವಾಗಿ ಹನುಮ ಕುಳಿತಿರುವುದನ್ನು ಭೀಮ ನೋಡಿ ಏ ಕೋತಿಯೇ ನಾನು ಬಂದಿದ್ದೇನೆ ದಾರಿ ಅಡ್ಡ ಹಾಕಿರುವ ನಿನ್ನ ಬಾಲವನ್ನು ತೆಗೆ ಎಂದು ಗರ್ವದಿಂದ ನುಡಿದನು. ಆಗ ಕೋತಿಯು ಅಪ್ಪಾ! ನಾನು ಮುದಿಯ ಬಾಲ ಎತ್ತಲಾರೆ, ಬಾಲವನ್ನು ಸರಿಸಿ ನೀನೆ ಮುನ್ನಡೆ ಎಂದು ತಿಳಿಸಿದ ಅದರಂತೆ ಭೀಮನು ಬಾಲವನ್ನು ಗಧೆಯಿಂದ ತನ್ನ ಸೊಕ್ಕಿನ ಬಲವನ್ನು ಪ್ರಯೋಗ ಮಾಡಿದ ಬಾಲ ಸ್ವಲ್ಪವೂ ಅಲುಗಾಡಲಿಲ್ಲ. ಆಗ ನೊಂದ ಭೀಮನು ದೈನ್ಯದಿಂದ ಮಹಾನುಭಾವ ನೀನಾರು? ಹೀಗೇಕೆ ಮಾಡಿದೆ ಎಂದು ಕೇಳಿದಾಗ ನಾನು ವಾಯುಪುತ್ರ ಹನುಮಂತ

ಎಂದನು. ಭೀಮನು ವಾಯುಪುತ್ರನೇ ಇಬ್ಬರೂ ಸಹೋದರರಾದ ಕಾರಣ ಅನುಕಂಪ ಬಂದು ಆಲಿಂಗನ ಮಾಡಿಕೊಂಡು ಆನಂದ ಬಾಷ್ಪಸುರಿಸಿದನು. ಮತ್ತು ಹನುಮಂತನ ವಾರ ಶನಿವಾರವು ಎಲ್ಲಾ ಭಕ್ತರ ಪೂಜೆಮಾಡುತ್ತಾರೆ. ಮತ್ತು ಭಾನುವಾರ ಶ್ರಿ ಮರುಕುಂಟ್ಲೇಶ್ವರ ದೇವರಿಗೆ ಪೂಜೆ ಮಾಡುತ್ತಾರೆ. ಇದರಿಂದ ಆ ದೈವಗಳಿಗೆ ಪವಾಡ ಮತ್ತು ಶಕ್ತಿಯ ದೈವಗಳೆಂದು ಕರೆಯುತ್ತಾರೆ.

**೬.೫. ಬಸವಣ್ಣ**

'ಬಸವಣ್ಣ' ಬಸವೇಶ್ವರ ದೇವರು ಈ ನಾಡಿಗೆ ದೊಡ್ಡವರು ಪ್ರತಿಯೊಂದು ಹಳ್ಳಿಯಲ್ಲಿ ನಗರಗಳಲ್ಲಿ ಬಸವೇಶ್ವರನನ್ನು ಪೂಜೆಮಾಡುತ್ತಾರೆ. ಬಸವಣ್ಣನ ವಾರ ಸೋಮವಾರ ಆಗಿರುತ್ತದೆ. ಶ್ರೀಮರುಕುಂಟ್ಲೇಶ್ವರ ದೇವರುಗಳು ಪೂಜೆಯ ಸಮಯದಲ್ಲಿ ಮೊದಲು ಪೂಜೆಯು ಈ ಬಸವಣ್ಣನಿಗೆ ಮಾಡುತ್ತಾರೆ. ಏಕೆಂದರೆ ದೇವರ ದನಗಳು ಗೂಳಿ (ಬಸವ) ದೇವರ ರೂಪದಲ್ಲಿ ಬರೀ ಪವಾಡಗಳನ್ನು ಕಂಡಿದ್ದಾರೆ. ಶಿವನ ಅವತಾರದಲ್ಲಿ ಕಂಡುಬಂದರೂ ಒಳ್ಳೆಯ ಭಕ್ತಿಪೂರಕವಾಗಿ ಆಚರಣೆಯ ಮೂಲಕ ಪೂಜೆಯನ್ನು ಮಾಡುತ್ತಾರೆ. ಈ ಗ್ರಾಮಗಳಲ್ಲಿ ವೀರಶೈವ ಜನಾಂಗದವರೆ ಬಸವಣ್ಣನ ಪೂಜೆಯನ್ನು ಮಾಡುತ್ತಾರೆ. ಶ್ರೀ ಮರುಕುಂಟ್ಲೇಶ್ವರ ಜಾತ್ರೆಯ ಸಮಯದಲ್ಲಿ ಇನ್ನಿತರೇ ಯಾವುದೇ ಹಬ್ಬ ಹರಿದಿನಗಳಲ್ಲಿ ಮತ್ತು ಗ್ರಾಮದೇವತೆಯ ಸಂದರ್ಭದಲ್ಲಿ ಬಸವಣ್ಣನಿಗೆ ವಿಶೇಷ ಪೂಜೆಯನ್ನು ಮಾಡುತ್ತಾರೆ.

ಒಟ್ಟಾರೆ ಇತರೆ ದೈವಗಳಿಗೂ ಮತ್ತು ಶ್ರೀ ಮರುಕುಂಟ್ಲೇಶ್ವರ ದೇವರಿಗೂ ಇರುವಂತಹ ಸಂಬಂಧವನ್ನು ನೋಡಿದ್ದೇವೆ. ಇಲ್ಲಿ ಹಿಂದೂ ಮುಸ್ಲಿಂರ ಬಾಂಧವ್ಯ ಈ ಗ್ರಾಮಗಳಲ್ಲಿ ಜನರ ನಡುವಿನ ಸಹೋದರ ಬಾಂಧವ್ಯ ಈ ದೈವದ ವ್ಯಾಪ್ತಿಯನ್ನು ಶ್ರೀ ಮರುಕುಂಟ್ಲೇಶ್ವರ ದೇವರು ಸಂಬಂಧದಿಂದ ವಾತ್ಸಲ್ಯ ಪರಿಪಾಲನೆಯ ನಿಯಮ ತಿಳಿದು ಬರುತ್ತದೆ. ಈ ದೇವರ ಬಗ್ಗೆ ಈ ಗ್ರಾಮಗಳಷ್ಟು ಅಲ್ಲದೆ ಬೇರೆ ಬೇರೆ ಊರುಗಳಿಂದ ಬಂದ ಭಕ್ತರು ಪೂಜೆಮಾಡಿಸುತ್ತಾರೆ.

## ಅಡಿಟಿಪ್ಪಣಿ

೧. ಡಾ.ಸಂಗಮೇಶ ಸವದತ್ತಿಮಠ, ತೌಲನಿಕ ದ್ರಾವಿಡ ಭಾಷಾ ವಿಜ್ಞಾನ, ಪುಟ-೧೩

೨. ಡಾ.ಎಸ್.ಲಕ್ಷ್ಮಿದೇವಿ, ಗ್ರಾಮ ಮತ್ತು ಶಿಷ್ಟ ದೇವತೆಗಳು, ಪುಟ-೯೧

೩. ಅದೇ, ಪುಟ-೧೦೧

೪. ಎಸ್.ಎಸ್.ಹಿರೇಮಠ, ಕರ್ನಾಟಕ ದಲಿತ ಸಾಹಿತ್ಯ ಪರಂಪರೆ ಭಾಗ-೨, ಜಾತ್ರೆಗಳು, ಪುಟ-೯

೫. ಡಾ.ತಿಪ್ಪೇರುದ್ರಸ್ವಾಮಿ (ಸಂ), ಮಲೆನಾಡು ಜಾನಪದ, ಪುಟ-೧೩೧

೬. ಚಟರ್ಜಿ ಎಸ್.ಕೆ, (ಅನು) ಹಂಪನಾ, ವಿಭಿನ್ನಭಾಷೆ ಸಂಸ್ಕೃತಿವರ್ಗಗಳು ಕಾಣಿಕೆ, ಯ.ಭಾ.ಸಂ, ಪುಟ-೬೦

# ಅಧ್ಯಾಯ - ಏಳು

# ಉಪಸಂಹಾರ

ಯಾವುದೇ ಅಧ್ಯಯನದಲ್ಲಿ ತೀವ್ರವಾಗಿ ತೊಡಗಿಸಿಕೊಂಡಾಗ ಹೊಸ ಹೊಸ ಮುಖಗಳು, ದಾರಿಗಳು, ಪರಿಚಯವಾಗುತ್ತಾ ಹೋಗುತ್ತವೆ. ಅಂತಹ ಅನುಭವವು ಪ್ರಸ್ತುತ ಅಧ್ಯಯನದಲ್ಲಿ ನನಗೂ ಆದದ್ದೆ. ಮೌಖಿಕ ಚರಿತ್ರೆಯನ್ನು ಈಗ ಕಾಣಿಸುವ ಐತಿಹ್ಯಗಳೊಂದಿಗೆ ಹೋಲಿಸಿ ನೋಡಿದರೆ ಕೆಲವು ಸತ್ಯಗಳು ಗೋಚರಿಸುತ್ತವ. ಹಾಗೇಯೇ ಸತ್ಯಕ್ಕೆ ದೂರವಾದ ಎಳೆಗಳೂ ಸಿಗುತ್ತವೆ, ಹೀಗಾಗಿ ಇಲ್ಲಿ ಸೂಕ್ಷ್ಮ ದೃಷ್ಟಿಕೋನದಿಂದ ಸತ್ಯಾಸತ್ಯತೆಗಳನ್ನು ಪರಾಮರ್ಶಿಸಿ ನೋಡುವ ಪ್ರಯತ್ನ ಮಾಡಿದ್ದೇನೆ. ಅಂತಹ ಕೆಲವು ಸಂಪ್ರದಾಯಗಳು ಇಲ್ಲಿ ದಾಖಲಿಸಲು ಪ್ರಯತ್ನಿಸಿದ್ದೇನೆ. ಈ ದಾಖಲೆಗೆ ಪ್ರಮುಖವಾದ ಆಕರವೆಂದರೆ ಮೌಖಿಕ ಕಥೆ, ಐತಿಹ್ಯ, ಸೊಬನದ ಹಾಡುಗಳಾಗಿವೆ, ಕಾರ್ಯಕ್ಷೇತ್ರದಿಂದ ನಮಗೆ ಸಿಕ್ಕ ಪವಾಡಗಳನ್ನು ದೈವದ ದೃಷ್ಟಿಯಿಂದ ಸಂಗ್ರಹಿಸಿ ಅಲ್ಲಿ ಕಂಡುಬರುವ ಸಂಪ್ರದಾಯಗಳು ಆಚರಣೆಗಳನ್ನು ಗತ ಸಂಸ್ಕೃತಿಯಿಂದ ಆಚರಿಸುತ್ತಾ ಬಂದಿದ್ದಾರೆ.

ಈ ದೈವಕ್ಕೆ ಸಂಬಂಧಿಸಿದಂತೆ ಯಾವುದೇ ಲಿಖಿತ ಆಕಾರಗಳು ಸಿಕ್ಕಿಲ್ಲ. ಎಲ್ಲಾ ವಿಷಯಗಳು ಮೌಖಿಕ ಪರಂಪರೆಯಲ್ಲಿ ಕಂಡುಬಂದಿವೆ.

* ಶ್ರೀ ಮರುಕುಂಟ್ಲೇಶ್ವರ ದೇವರು ನೆಲೆಸಿರುವಂತಹ ಗ್ರಾಮವಾದ ದಿಬ್ಬದಹಳ್ಳಿಯು ಭೌಗೋಳಿಕವಾಗಿ ತುಂಬಾ ಸಂಪದ್ಭರಿತ ಗ್ರಾಮವಾಗಿದ್ದು, ಅಲ್ಲಿನ ಜನರು ಉತ್ತಮ ಪರಿಸರದಲ್ಲಿ ವಾಸಮಾಡುತ್ತಿದ್ದಾರೆ. ಹಾಗೂ ತಮ್ಮ ಉಪಜೀವನವನ್ನು ನಡೆಸುವುದಕ್ಕಾಗಿ ಕೃಷಿಯನ್ನು, ನೀರಾವರಿಯನ್ನು ಬಳಸಿಕೊಂಡು ಉತ್ತಮ ಬೆಳೆಗಳನ್ನು ಬೆಳೆಯುತ್ತಾ ಅಲ್ಲಿಯ ಸಸ್ಯ ಸಂಪತ್ತು ಮತ್ತು ಪ್ರಾಣಿಸಂಪತ್ತುಗಳ ಬೆಳವಣಿಗೆಯಲ್ಲಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿದ್ದಾರೆ ಎಂಬಂತಹ ಅಂಶವನ್ನು ಭೌಗೋಳಿಕ ವಿವರದಲ್ಲಿ ಕಂಡುಕೊಂಡಿದ್ದೇನೆ.

* ದೇವರ ಭೌತಿಕ ವಿವರದಲ್ಲಿ ಶ್ರೀ ಮರುಕುಂಟ್ಲೇಶ್ವರ ದೇವರು ಮೊದಲು ನೆಲೆಗೊಂಡಿದ್ದು ಶಿವಗಂಗೆಯಲ್ಲಿ, ನಂತರ ದಿಬ್ಬದಹಳ್ಳಿಯಲ್ಲಿ ತನ್ನ ಅಸ್ತಿತ್ವವನ್ನು ಅಥವಾ ನೆಲೆಯನ್ನು

ಕಂಡುಕೊಂಡಿರುವುದನ್ನು ನಾವು ಕಾಣಬಹುದು. ಈ ದೈವದ ವಾಸ್ಥಾನ ಮೂಲತಃ ಗುಡಿಸಲು ಆಗಿದೆ. ಈತನ ಪವಾಡಗಳಿಂದಾಗಿ ಅನೇಕ ಜನರಿಗೆ ಉಪಯೋಗಗಳು ಕಂಡು ಬಂದಿರುವುದರಿಂದ ಅನೇಕ ಭಕ್ತರು ಹಾಗೂ ಸರಕಾರದ ಗಮನವನ್ನು ಸೆಳೆದು, ಗುಡಿ, ಗೋಪುರವನ್ನು ನಿರ್ಮಿಸಬೇಕೆಂದು ನಿರ್ಮಾಣ ಹಂತದಲ್ಲಿರುವುದನ್ನು ನಾವು ಕಂಡುಕೊಂಡಂತಹ ಅಂಶವಾಗಿದೆ.

* ಮರುಕುಂಟ್ಲೇಶ್ವರ ದೇವರು ಉಳಿದ ದೇವರಂತೆ ಯಾವುದೇ ರೀತಿಯ ಆಡಂಬರಗಳಿಂದ ಕೂಡಿರದೇ ಸರಳ ರೀತಿಯಲ್ಲಿ ಅಲಂಕಾರಗೊಂಡಿರುವುದನ್ನು ಕಾಣಬಹುದು. ಇದರ ಮತ್ತೊಂದು ವಿಶೇಷವೆಂದರೆ ಈ ದೇವರು ಬೆಳ್ಳಿ, ಕೋಲುಗಳಿಂದ ಕೂಡಿದ್ದು, ಅದರ ಸುತ್ತ ಕರಿಕಂಬಳಿಯನ್ನು ಸುತ್ತುತ್ತಾರೆ. ಬೆಳ್ಳಿಯ ಮುಖವನ್ನು ಹೊಂದಿದ್ದಂತಹ ಈ ದೇವರು ಈಶ್ವರ, ಬಸವೇಶ್ವರನ ಅವತಾರದಲ್ಲಿ ಕಂಡು ಬಂದಿರುವದು ತಿಳಿದುಬಂದಿದೆ.

* ಶ್ರೀ ಮರುಕುಂಟ್ಲೇಶ್ವರ ದೇವರ ಆಡಳಿತವನ್ನು ಲಿಂಗಾಯ್ತಿ ಜನಾಂಗಕ್ಕೆ ಸೇರಿದ ಕೆಂಗ್ಲೂಕಪ್ಲೆ ತಿಮ್ಮರೆಡ್ಡಿಯವರು ವಹಿಸಿಕೊಂಡಿರುತ್ತಾರೆ. ಈ ದೇವರಿಗೆ ತನ್ನದೇ ಆದಂತಹ ಯಾವುದೇ ಆಸ್ತಿ ಪಾಸ್ತಿ ಕಂಡುಬರುವುದಿಲ್ಲ. ಭಕ್ತರು ನೀಡುವಂತಹ, ದೇಣಿಗೆ, ಕಾಣಿಕೆಗಳು, ವಸ್ತುಗಳ ರೂಪದಲ್ಲಿ ದವಸಧಾನ್ಯಗಳನ್ನು ನೀಡುತ್ತಾರೆ. ಈ ಎಲ್ಲಾ ಅಂಶಗಳು ದೇವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ ಇಂದಿಗೂ ತನ್ನ ನೆಲೆಯನ್ನು ಗಟ್ಟಿಯಾಗಿ ನೆಲೆಯೂರಲು ಕಾರಣವಾಗಿವೆ ಎಂಬಂತಹ ಅಂಶಗಳನ್ನು ಗುರುತಿಸಬಹುದು.

* ಶ್ರೀಮರುಕುಂಟ್ಲೇಶ್ವರ ದೇವರು ಮೌಖಿಕ ಪರಂಪರೆಯಿಂದ ಕೂಡಿದ್ದು, ಈ ದೇವರ ಬಗ್ಗೆ ಯಾವುದೇ ತೆರನಾದ ಲಿಖಿತ ಆಧಾರಗಳು ನಮಗೆ ಇಂದಿಗೂ ಕಂಡುಬಂದಿಲ್ಲ. ಈ ದೇವರ ಹುಟ್ಟು, ಬೆಳವಣಿಗೆ, ಮಹಿಮೆ, ಪವಾಡ ಈ ಮುಂತಾದ ಅಂಶಗಳನ್ನು ಪುರಾಣ ಕಥೆಗಳಲ್ಲಿ ಕಾಣಬಹುದು. ಅದೇ ತೆರನಾಗಿ ಸೋಬಾನದ ಹಾಡುಗಳು, ಗಾದೆಗಳು, ಒಗಟುಗಳಲ್ಲಿಯೂ, ಆಚರಣೆಗಳು, ಸಂಪ್ರದಾಯಗಳು ಹುಟ್ಟು ಬೆಳವಣಿಗೆಯನ್ನು ಗುರುತಿಸಬಹುದು ಎಂಬಂತಹ ಅಂಶವನ್ನು ಕಾಣಬಹುದಾಗಿದೆ.

* ಈ ದೇವರು ನೆಲೆಸಿರುವಂತಹ ದಿಬ್ಬದಹಳ್ಳಿಯ ಸುತ್ತ ಮುತ್ತಲಿನ ಊರುಗಳ ಜನರು ಈ ದೇವರಿಗೆ ನಡೆದುಕೊಳ್ಳುತ್ತಾರೆ. ಈ ದೇವರ ಜಾತ್ರೆಯು ವರ್ಷಕ್ಕೊಮ್ಮೆ. ಅಂದರೆ ಪ್ರತೀವರ್ಷದ ಫೆಬ್ರುವರಿ ತಿಂಗಳಲ್ಲಿ ನೆಡೆಯುತ್ತಿದ್ದು ಅಪಾರ ಸಂಖ್ಯೆಯಲ್ಲಿ ಭಕ್ತರು ಸೇರಿ ಎಲ್ಲಾರು ಒಂದೇ ಮನಸ್ಸಿನಿಂದ ದೇವರನ್ನು ನೆನೆಯುವುದು. ಆತನಿಗೆ ಕಾಣಿಕೆಗಳನ್ನು ಅರ್ಪಿಸುವುದು, ಪೂಜೆಮಾಡಿಸುವುದು, ನೈವೇದ್ಯ ಮಾಡಿಸುವುದು ಮುಂತಾದ ಆಚರಣೆಗಳು ಕಂಡು ಬರುತ್ತವೆ. ಅದರಲ್ಲಿ ವಿಶೇಷವಾಗಿ ಗಂಗೆ ಪೂಜೆ, ಅಗ್ನಿಕೊಂಡ ಎತ್ತುಗಳನ್ನು ಓಡಿಸುವುದು ಸಾಂಸ್ಕೃತಿಕ ಕಾರ್ಯಕ್ರಮವಾದ ಕೋಲಾಟಹಾಕುವುದು, ಭಜನೆ, ನಾಟಕಮಾಡುವುದು ಮುಂತಾದವುಗಳು ಕಂಡುಬರುತ್ತವೆ.

* ಶ್ರೀಮರುಕುಂಟ್ಲೇಶ್ವರ ದೇವರು ಅನೇಕ ದೈವಗಳೊಂದಿಗೆ ತನ್ನದೇ ಆದಂತಹ ಸಂಬಂಧ ಹೊಂದಿರುವುದನ್ನು ಗುರುತಿಸಬಹುದು. ಅವುಗಳೆಂದರೆ ಗಾದ್ರಿಪಾಲನಾಯ್ಕ, ಜೋಸೆದೇವರು, ಗ್ರಾಮ

ದೇವತೆಮಾರಮ್ಮ, ದುರುಗಮ್ಮ, ಮಲಿಯಮ್ಮ, ಹನುಮಂತರಾಯ, ಪೀರಲದೇವರು, ಬಸವಣ್ಣ ಈ ಮುಂತಾದ ದೇವರುಗಳೊಂದಿಗೆ ಯಾವ ರೀತಿಯದಾಗಿ ಸಂಬಂಧವನ್ನು ಹೊಂದಿದ್ದಾನೆ ಎಂಬಂತಹ ಅಂಶವನ್ನು ಅಧ್ಯಯನದ ಅಂಶಗಳಲ್ಲಿ ಕಂಡುಕೊಳ್ಳಲಾಗಿದೆ.

* ಈ ದೇವರ ಹುಟ್ಟು, ಬೆಳವಣಿಗೆಗೆ, ಆಚರಣೆಗಳು, ಸಂಪ್ರದಾಯಗಳು ಮುಂತಾದ ಮೂಢನಂಬಿಕೆ ಅಂಶಗಳನ್ನು ದಿಬ್ಬದಹಳ್ಳಿಯ ಸುತ್ತಮುತ್ತಲಿನ ಊರಿನ ಜನಗಳಲ್ಲಿ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಲವಾರು ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ.

* ಶ್ರೀ ಮರುಕುಂಟ್ಲೇಶ್ವರ ದೇವರನ್ನು ಕ್ಯಾಮರಾದಲ್ಲಿ ಸೆರೆ ಹಿಡಿಯಲು ಪ್ರಯತ್ನಿಸಿದರೆ ದೇವರ ಮೂರ್ತಿ ಅಥವಾ ಬಿಂಬ, ಕಾಣದೇ ಕೇವಲ ಕಪ್ಪುಬಣ್ಣ ಮಾತ್ರ ಕಂಡುಬರುತ್ತದೆ. ಈ ತರಹದ ಪ್ರಯತ್ನವನ್ನು ಹಿಂದಿನಿಂದಲೂ ಪ್ರಯತ್ನಿಸಿದರೂ ಅದು ಸಾಧ್ಯವಾಗದೇ ಇರುವುದು ಈ ದೇವರ ಒಂದು ವಿಶೇಷತೆಯಾಗಿದೆ. ಉಳಿದಂತೆ ಗೂಳಿ, ದೇವರದನಗಳನ್ನು ಮಾತ್ರ ಕ್ಯಾಮರಾದಲ್ಲಿ ಸೆರೆಹಿಡಿಯಬಹುದು.

ಶ್ರೀಮರುಕುಂಟ್ಲೇಶ್ವರ ದೇವರು ಈ ಮೇಲೆ ಹೇಳಿದ ಎಲ್ಲಾ ಅಂಶಗಳನ್ನು ನಾವು ಕಾಣುಬಹುದಾಗಿದೆ. ಈ ದೈವವು ದ್ರಾವಿಡರ ವಿಶಿಷ್ಟತೆ ಸಂಬಂಧಿಸಿದೆ. ದ್ರಾವಿಡ ಶೈಲಿಯ ಕೆಲ ವಿಶೇಷತೆಗಳನ್ನು ಈ ಕೆಳಗಿನಂತೆ ನಾವು ಕಾಣಬಹುದಾಗಿದೆ. ಅವುಗಳೆಂದರೆ

* ಶ್ರೀ ಮರುಕುಂಟ್ಲೇಶ್ವರ ದೇವರು ಮೂಲತ ದ್ರಾವಿಡರ ದೈವ, ಏಕೆಂದರೆ ಮೊದಲು ದ್ರಾವಿಡರು ಇಂದು ಅನೇಕ ಕಡೆ ತಮ್ಮ ಆರಾಧ್ಯ ದೇವರೆಂದು ಪೂಜಿಸುತ್ತಾರೆ.

* ಗಂಗೆಪೂಜೆ ಬೆಳೆದಿದ್ದು, ಆದರೆ ದ್ರಾವಿಡರು ದೈವ ಶಿವನಿಗೂ ಆಚರಣೆಯು ವಿಶೇಷವಾಗಿ ಕಂಡು ಬಂತು. ಗಂಗೆಪೂಜೆ ದ್ರಾವಿಡ ಆರಾಧನೆ ಶಿವನೂ ದ್ರಾವಿಡರ ಆರಾಧ್ಯ ದೈವ.

ಶ್ರೀ ಮರುಕುಂಟ್ಲೇಶ್ವರ ದೇವರ ಬೆತ್ತದಿಂದ ಕಿಲಾರಿ ಪಾಪಯ್ಯನು ಒಣ ಭೂಮಿಯಿಂದ ನೀರು ಬರುವಂತೆ ಮಾಡಿದನು. ಇದು ವಿಶೇಷವಾಗಿ ನಮಗೆ ತಿಳಿದು ಬರುತ್ತದೆ. ಜಲ ಮತ್ತು ಶಿವ ದೈವಗಳ ಸಂಕೇತವನ್ನು ನಾವಿಲ್ಲಿ ಕಾಣಬಹುದು.

* ಈ ದೈವದ ಅಗ್ನಿಕುಂಡದ ಪೂಜಾರಿಗಳು ಮೈ ಮೇಲೆ ಯಾವುದೇ ಬಟ್ಟೆ ಇಲ್ಲದೆ ಕೆಂಡಕ್ಕೆ ಹೋಗುತ್ತಾರೆ. ನೇರೆಯುತ್ತಾರೆ. ಆದರೆ ಅವರಿಗೆ ಯಾವುದೇ ರೀತಿಯ ಅಪಾಯವು ಇದುವರಿಗೆ ಕಂಡುಬಂದಿಲ್ಲ.

* ಶ್ರೀಮರುಕುಂಟ್ಲೇಶ್ವರ ದೇವರು ಹಿಂದಿನ ಕಾಲದಿಂದ ಈ ಆಧುನಿಕ ಜಗತ್ತಿನವರೆಗೆ ಯಾವುದೇ ಪೋಟೋ, ವಿಡಿಯೋ ಹಾಗೂ ಇನ್ನಿತರ ಯಾವುದೇ ಛಾಯಚಿತ್ರಗಳಿಗೆ ಬಿದ್ದಿಲ್ಲ ಇದು ಒಂದು ದೊಡ್ಡ ಪವಾಡವಾಗಿ ನಮ್ಮ ಕಣ್ಣುಮುಂದೆ ಕಾಣುತ್ತದೆ.

* ಈ ದೈವವು ಗಂಗೆಪೂಜೆ ಮಾಡುವ ಚಲುಮೆಯಲ್ಲಿ ಲಿಂಗದಕಾಯಿ ಮತ್ತು ಬಸವಣ್ಣನ ಮೂರ್ತಿಗಳು ಕಂಡು ಬಂದಿವೆ.

* ಈ ದೈವದ ಇನ್ನೊಂದು ಪವಾಡವೆಂದರೆ ದೇವರ ಗೂಳಿ ಬಸವ ಬಿಡಿದಿನಗಳಲ್ಲಿ ಯಾವುದೇ ಊರಲ್ಲಿ ಇದ್ದರೆ ಅದು ದೇವರ ಜಾತ್ರೆಯ ಸಂದರ್ಭದಲ್ಲಿ ತನ್ನಷ್ಟಕ್ಕೆ ತಾನೇ ದೇವರಲ್ಲಿ ಬರುತ್ತದೆ.

* ಶ್ರೀಮರುಕುಂಟ್ಲೇಶ್ವರ ದೇವರು ಮತ್ತು ಇತರೆ ದೈವಗಳಾದ, ದುರುಗಮ್ಮ, ಮಾರಮ್ಮ, ಮಲಿಯಮ್ಮ, ಈ ದೇವತೆಗಳನ್ನು ಕೆಳವರ್ಗದ ಜನಾಂಗದವರು ಪೂಜಿಸಿದರೂ, ಪ್ರಾಧಾನ್ಯವಾಗಿ ಶ್ರೀಮರುಕುಂಟ್ಲೇಶ್ವರ ದೇವರ ಸಂಬಂಧವನ್ನು ಕಲ್ಪನೆಯಲ್ಲಿ ಇಟ್ಟುಕೊಂಡೆ ಪೂಜೆಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಶಿಷ್ಟ ಸಂಸ್ಕೃತಿಯತ್ತ ಹೊರಳುತ್ತಿರುವುದನ್ನು ನಾವು ಪ್ರಸ್ತುತ ಸಂದರ್ಭದಲ್ಲಿ ಮನಗಾಣಬಹುದಾಗಿದೆ. ಲಭ್ಯ ಮಾಹಿತಿಗಳ ಮೂಲಕ ಈ ದೈವದ ಸಾಂಸ್ಕೃತಿಕ ಚಿತ್ರಣವನ್ನು ಕೊಡಲು ಪ್ರಯತ್ನಿಸಲಾಗಿದೆ.

ಅಧ್ಯಯನದ ನಿಲುವು ಅಂತಿಮವಲ್ಲ, ಸದ್ಯದ ಸ್ಥಿತಿಯ ವಾಸ್ತವಿಕ ರೂಪ. ಕ್ರಮಬದ್ಧ ಅಧ್ಯಯನ ಕ್ರಮ ಇಲ್ಲಿ ಮುಖ್ಯ. ಸಮರ್ಥನೀಯ ಅಂಶಗಳಿಂದ ವಿಷಯವೊಂದನ್ನು ಅಧ್ಯಯನ ಮಾಡಲಾಗಿದೆ. ಸಂಶೋಧನೆ ನಿರಂತರ ಹಾಗೆಯೇ ಸಂಶೋಧನಾ ಮಥಿತ ಸತ್ಯ ಬೆಣ್ಣೆಯಷ್ಟೇ ಕಾಲಾವಕಾಶ ಹೊಂದಿರುವುದು ಎಂಬ ಅರಿವಿನಿಂದ ಸತ್ಯದ ಆತ್ಯಂತಿಕ ಹುಡಕಾಟದ ನೆಲೆಯೇ ಸಂಪ್ರಬಂಧದ ಮೂಲ ಸೆಲೆಯಾಗಿಸಿ ರೂಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ದೈವದ ಸಮಗ್ರ ನೆಲೆಯ ತಲಸ್ಪರ್ಶಿ ಅಧ್ಯಯನವೊಂದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

* * *

## ಗ್ರಂಥಸೂಚಿ

೦೧. ಡಾ.ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಲಕ್ಷ್ಮಿಮುದ್ರಣಾಲಯ, ಚಾಮರಾಜಪೇಟೆ, ೧೯೯೭

೦೨. ಜವರೇಗೌಡ ದೇ, ಜನಪದ ಅಧ್ಯಯನ, ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷನ್ಸ್, ಮೈಸೂರು, ೨೦೦೧

೦೩. ಎಸ್.ಜಿ.ಸಿದ್ಧರಾಮಯ್ಯ, ಕರ್ನಾಟಕ ಜಾತ್ರೆಗಳು, ಪುಸ್ತಕ ಮಾಲೆ, ಡಾ.ಎಸ್‌ಪಿ.ಪದ್ಮಪ್ರಸಾದ್, ಸಂಪಾದಕರು, ೧೯೯೫

೦೪.ಡಾ.ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ಜ್ಯೋತಿಪ್ರಕಾಶನ, ಮೈಸೂರು, ೨೦೦೭

೦೫. ರಾಜಪ್ಪದಳವಾಯಿ, ಕನ್ನಡ ಸಾಹಿತ್ಯಕೋಶ, ದಳಾವಾಯಿ ಪ್ರಕಾಶನ, ಬೆಂಗಳೂರು, ೨೦೦೮

೦೬. ಡಾ.ವೀರಣ್ಣದಂತೆ, ಅಯ್ಕೆ ಗಾದೆಗಳು ಹಾಗೂ ಒಗಟುಗಳು, ಕವಿರಾಜ ಪ್ರಕಾಶನ, ಸರಸ್ವತಿಪುರ, ೨೦೦೭

೦೭. ಡಾ.ಸಿದ್ಧಲಿಂಗಯ್ಯ, ಜನಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಸಾರಾಂಗ, ೨೦೦೭

೦೮. ಪ್ರೋ.ಡಿ.ಲಿಂಗಯ್ಯ ಮತ್ತು ಡಾ.ಕೆ.ಆರ್.ಸಂಧ್ಯಾರೆಡ್ಡಿ, ಜನಪದ ಸ್ವರೂಪ ಮತ್ತು ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೬

೦೯. ಪ್ರೋ.ಹಿ.ಶಿ.ರಾಮಚಂದ್ರೇಗೌಡ, ಜಾನಪದ ಗ್ರಹಿಕೆ ಮತ್ತು ಪರಿಲ್ಪನೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೨೦೦೪

೧೦. ಡಾ.ಸಂಗಮೇಶ ಸವದತ್ತಿಮಠ, ತೌಲನಿಕ ದ್ರಾವಿಡಭಾಷೆ ವಿಜ್ಞಾನ, ತ್ವರಿತಮುದ್ರಣ ಆಫ್‌ಸೆಟ್, ಪ್ರಿಂಟರ್ಸ್, ಗದಗ, ೨೦೦೭

೧೧. ಡಾ.ಎಸ್.ಲಕ್ಷ್ಮಿದೇವಿ, ಗ್ರಾಮ ಮತ್ತು ಶಿಷ್ಟದೇವತೆಗಳು, ಚಿತ್ಕಲಾ ಪ್ರಕಾಶನ, ಕುಪ್ಪಂ, ೨೦೦೭

೧೨. ಚಿನ್ನಸ್ವಾಮಿ ಸೋಸಲೆ, ನಮ್ಮ ಗ್ರಾಮಗಳು ಅಂದು ಇಂದು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೩. ನಾಗೇಶ್ ಎಚ್.ವಿ, ಗ್ರಾಮವ್ಯಾಸಂಗ, ಚಂದ್ರನಾತ ಪ್ರಕಾಶನ, ಧಾರವಾಡ, ೧೯೮೧

೧೪. ಹಿರೇಮಠ ಎಸ್.ಎಸ್, ಜಾತ್ರೆಗಳು, ಮಮತಾ ಪ್ರಕಾಶನ, ಹೊಸಪೇಟೆ, ೧೯೯೩

೧೫. ಪರಮಶಿವಯ್ಯ ಜಿ.ಸಂ, ಜನಪದ, ಸತ್ಯಸಾದನ ಪಬ್ಲಿಕೇಷನ್, ಮೈಸೂರು, ೧೯೭೮

೧೬. ನಾಗೇಶ್ ಕೆ.ಹೆಬ್ಬಾಲೆ, ಜಾನಪದ ಬನಸಿರಿ, ರುಚಿರಾ ಪ್ರಕಾಶನ, ಹೊಸಪೇಟೆ, ೨೦೦೨

೧೬. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯನ, ಕರ್ನಾಟಕ ಸಾಹಿತ್ಯ ಅಕಾಡಮೆ, ಬೆಂಗಳೂರು, ೨೦೦೮

೧೭. ಡಾ.ಬಿ.ಎಂ.ಪುಟ್ಟಯ್ಯ, ದಲಿತರ ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೮. ಮೇಘನಾತ ಎ.ಕೆ.ಎನ್, ಬೈರಪುರದ ಮರಿಸ್ವಾಮಿ ಜಾನಪದ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಎಂ.ಫಿಲ್, ಕಿರುಪ್ರಬಂಧ

೧೯. ಉಮಾಪತಿ ಬಿ, ಕಡಲಬಾಳು ಆಂಜನೇಯ ಸ್ವಾಮಿ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಎಂ.ಫಿಲ್, ಕಿರುಪ್ರಬಂಧ

೨೦. ಡಾ. ಸುಚೇತ ನವರತ್ನ, ಜ್ಞಾನಶಾಸ್ತ್ರ, ಮಂಟಪಮಾಲೆ ೧೪೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

# ವಕ್ತೃವಿವರ

| ಕ್ರ.ಸಂ | ಹೆಸರು | ವಯಸ್ಸು | ವೃತ್ತಿ | ಜಾತಿ | ಊರು |
|---|---|---|---|---|---|
| ೦೧. | ತಿಮ್ಮಾರೆಡ್ಡಿ | ೭೦ | ವ್ಯವಸಾಯ | ಲಿಂಗಾಯ್ತಿ | ದಿಬ್ಬದಹಳ್ಳಿ |
| ೦೨. | ಮಲ್ಲಿಕಾರ್ಜುನ | ೫೦ | ವ್ಯವಸಾಯ | ನಾಯಕ | ದಿಬ್ಬದಹಳ್ಳಿ |
| ೦೩. | ಓಬನಗೌಡ | ೯೦ | ವ್ಯವಸಾಯ | ನಾಯಕ | ಗಂಡಬೊಮ್ಮನಹಳ್ಳಿ |
| ೦೪. | ಶನಿವರಾದಜ್ಜ | ೯೧ | ವ್ಯವಸಾಯ | ನಾಯಕ | ದಿಬ್ಬದಹಳ್ಳಿ |
| ೦೫.. | ಬೋರಯ್ಯ | ೭೦ | ವ್ಯವಸಾಯ | ನಾಯಕ | ದಿಬ್ಬದಹಳ್ಳಿ |
| ೦೬. | ಪಾಪಣ್ಣ ಪಿ | ೬೦ | ಶಿಕ್ಷಕ | ನಾಯಕ | ದಿಬ್ಬದಹಳ್ಳಿ |
| ೦೭. | ಪಾಲಯ್ಯ | ೭೦ | ವ್ಯವಸಾಯ | ನಾಯಕ | ದಿಬ್ಬದಹಳ್ಳಿ |
| ೦೮. | ಬಸವರಾಜ | ೫೦ | ಶಿಕ್ಷಕ | ಲಿಂಗಾಯ್ತಿ | ದಿಬ್ಬದಹಳ್ಳಿ |
| ೦೯. | ಚನ್ನಪ್ಪ | ೪೫ | ಚಾಲಕ | ಲಿಂಗಾಯ್ತಿ | ದಿಬ್ಬದಹಳ್ಳಿ |
| ೧೦. | ಕಟವಾಡಿಚನ್ನಪ್ಪ | ೬೦ | ವ್ಯವಸಾಯ | ಲಿಂಗಾಯ್ತಿ | ಎಕ್ಕೆಗೊಂದಿ |
| ೧೧. | ಕಿಲಾರಿ ಬೋರಯ್ಯ | ೬೦ | ವ್ಯವಸಾಯ | ನಾಯಕ | ದಿಬ್ಬದಹಳ್ಳಿ |
| ೧೨. | ಸೆಕೆರಿಟ್ರಿಬೋರಯ್ಯ | ೬೦ | ಅಂಚೇಇಲಾಖೆ | ನಾಯಕ | ದಿಬ್ಬದಹಳ್ಳಿ |
| ೧೩. | ಕೊಟ್ರೇಶ್ | ೪೦ | ವ್ಯವಸಾಯ | ಲಿಂಗಾಯ್ತಿ | ದಿಬ್ಬದಹಳ್ಳಿ |
| ೧೪. | ಭೀಮಣ್ಣ | ೫೦ | ವ್ಯವಸಾಯ | ಲಿಂಗಾಯ್ತಿ | ದಿಬ್ಬದಹಳ್ಳಿ |
| ೧೫. | ರಂಗಸ್ವಾಮಿ | ೫೦ | ವ್ಯವಸಾಯ | ಲಿಂಗಾಯ್ತಿ | ದಿಬ್ಬದಹಳ್ಳಿ |
| ೧೬. | ಯರ್‍ರಯ್ಯ | ೫೦ | ಚಾಲಕ | ನಾಯಕ | ದಿಬ್ಬದಹಳ್ಳಿ |
| ೧೭. | ಬಸತಿಪ್ಪಯ್ಯ | ೬೦ | ವ್ಯವಸಾಯ | ಮಾದಿಗ | ಎಕ್ಕಗೊಂದಿ |
| ೧೮. | ಶಾಸ್ತ್ರಿಪಾಪಯ್ಯ | ೫೦ | ವ್ಯವಸಾಯ | ನಾಯಕ | ರಾಮಸಾಗರಹಟ್ಟಿ |
| ೧೯. | ರುದ್ರಣ್ಣ | ೫೦ | ವ್ಯವಸಾಯ | ನಾಯಕ | ರಾಮಸಾಗರಹಟ್ಟಿ |
| ೨೦. | ನರಸಿಂಹಯ್ಯ | ೬೦ | ಕಾರ್ಮಿಕ | ಬೋವಿ | ರಾಮಸಾಗರಹಟ್ಟಿ |
| ೨೧. | ಗೌಡ್ರುಹನುಮಂತಪ್ಪ | ೬೦ | ವ್ಯವಸಾಯ | ನಾಯಕ | ತಿಮ್ಮನಹಳ್ಳಿ |
| ೨೨. | ಉನುಮಲುಬಸಯ್ಯ | ೭೦ | ವ್ಯವಸಾಯ | ನಾಯಕ | ತಿಮ್ಮನಹಳ್ಳಿ |
| ೨೩. | ಏಕಾಂತಪ್ಪ | ೫೦ | ಪೋಸ್ಟ್‌ಮನ್ | ನಾಯಕ | ತಿಮ್ಮನಹಳ್ಳಿ |
| ೨೪. | ಜನ್ನೊಬಯ್ಯ | ೬೦ | ವ್ಯವಸಾಯ | ನಾಯಕ | ತಿಮ್ಮನಹಳ್ಳಿ |
| ೨೫. | ಪೂಜಾರಿ ಬೋರಯ್ಯ | ೬೦ | ವ್ಯವಸಾಯ | ನಾಯಕ | ತಿಮ್ಮನಹಳ್ಳಿ |

| | | | | | |
|---|---|---|---|---|---|
| ೨೬. | ರಂಗಜ್ಜ | ೯೦ | ಕೂಲಿ | ನಾಯಕ | ತಿಮ್ಮಹಳ್ಳಿ |
| ೨೭. | ಪೂಜಾರಿ ಪಾಲಯ್ಯ | ೮೦ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೨೮. | ಶೆಟ್ಟಿಬಸಯ್ಯ | ೮೦ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೨೯. | ಕೊಲುಮೆ ಬಸಣ್ಣ | ೫೦ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೩೦. | ಸಣ್ಣಪಾಲಯ್ಯ ಹೆಚ್ | ೫೦ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೩೧. | ಗಂಗಮ್ಮ ಪಾಲಯ್ಯ | ೬೫ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೩೨. | ಮಲಿಯಜ್ಜಿ | ೮೮ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೩೩. | ಬಸಣ್ಣ ಪೂಜಾರಿ | ೪೪ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೩೪. | ಹೆಚ್.ಸೋಮಣ್ಣ | ೪೪ | ಕೂಲಿ | ಮಾದಿಗ | ತಿಮ್ಮಹಳ್ಳಿ |
| ೩೫. | ಲೀಲಮ್ಮ | ೫೦ | ಕೂಲಿ | ನಾಯಕ | ತಿಮ್ಮಹಳ್ಳಿ |



॥ ಶ್ರೀ ಮರುಕುಂಟ್ಲೇಶ್ವರ ಸ್ವಾಮಿ ಪ್ರಸನ್ನ ॥





# ಶ್ರೀ ಮರುಕುಂಟ್ಲೇಶ್ವರ ಜಾತ್ರೆ, ಕೆ. ದಿಬ್ಬದಹಳ್ಳಿ,

ಕೂಡ್ಲಿಗಿ ತಾಲ್ಲೂಕು : : ಬಳ್ಳಾರಿ ಜಿಲ್ಲೆ.



# ಆಹ್ವಾನ ಪತ್ರಿಕೆ



ದಿನಾಂಕ : 25-2-2008 ನೇ ಸೋಮವಾರ ಮಧ್ಯಾಹ್ನ 4-00 ಗಂಟೆಗೆ ಹೊಸ ಪೌಳಿಗೆ ಹೊರಡುತ್ತೆದೆ. ರಾತ್ರಿ 3-00 ಗಂಟೆಗೆ ಅಗ್ನಿಕುಂಡ ಮತ್ತು ಬಜನೆಗಳು ಇರುತ್ತದೆ.

ದಿನಾಂಕ :26-2-2008 ನೇ ಮಂಗಳವಾರ ದೇವರ ಬಸವಗಳು ಮೇರವಣಿಗೆ ಮಣೆವು ಹಣ್ಣು ಕಾಯಿ ಮಾಡಿಸುವುದು, ಮತ್ತು ಕೋಲಾಟ ಹಾಗೂ ಮನೊರಂಜನೆ ಕಾರ್ಯಕ್ರಮಗಳು ಇರುತ್ತವೆ.

27-2-2008 ನೇ ಬುಧುವಾರ ಭಕ್ತಾದಿಗಳ ಕಾರ್ಯಕ್ರಮಗಳಿರುತ್ತವೆ.

ದಿನಾಂಕ : 28-2-2008 ನೇ ಗುರುವಾರ ಸಾಯಂಕಾಲ 4-00 ಗಂಟೆಗೆ ದೇವರು ಗರ್ಭಗುಡಿಗೆ ಮರುಳುವುದು ಊರಿನ ಪ್ರಮುಖರು ದೇವರ ಭಕ್ತಾದಿಗಳು ಶ್ರೀಮರುಕುಂಟ್ಲೇಶ್ವರ ಸ್ವಾಮಿ, ಶ್ರೀ ಗಾದ್ರಿಪಾಲನಾಯಕಸ್ವಾಮಿ. ಶ್ರೀ ಬೋಸೆದೇವರು

| | | |
|---|---|---|
| ಶ್ರೀ ಮರುಕುಂಟ್ಲೇಶ್ವರ ಸ್ವಾಮಿ<br>ದೇವರ ಪೂಜಾರಿ<br>ಶ್ರೀ ಪಾಲಯ್ಯ | ಶ್ರೀ ಗಾದ್ರಿಪಾಲನಾಯಕ<br>ಸ್ವಾಮಿ ದೇವರ ಪೂಜಾರಿ<br>ಶ್ರೀ ಈಶ್ವರಪ್ಪ | ಶ್ರೀ ಬೋಸೆ ದೇವರ ಸ್ವಾಮಿ<br>ಪೂಜಾರಿ<br>ಶ್ರೀ ನಾಗಭೂಷಣ |

ಸ್ವಾಮಿ ಭಕ್ತಾಧಿಗಳು ಪತ್ರಿಕೆಗಳ ಪ್ರಕಟಣೆ :

**ಕೆ. ದಿಬ್ಬದಹಳ್ಳಿ ಊರಿನ ಗ್ರಾಮಸ್ಥರು**



ಅಗ್ನಿಕುಂಡದ ಪೂಜಾರಿ



ಶಿವಗಂಗೆಯಲ್ಲಿ ಒಡೆದ ನಾಗರಹೆಡೆ



ಹೆಣ್ಣಿನ ಅವತಾರದ ರಾಕ್ಷಸಿಗಳು



ದೇವರ ಹಟ್ಟಿಯಲ್ಲಿರುವ ಬನ್ನಿಮರ

ಶಿವಗಂಗೆಯಲ್ಲಿ ದೊರೆತ ಮಾಸ್ತಿ ಕಲ್ಲುಗಳು.





ಕೋಟೆ ದುರುಗಮ್ಮನ ಗುಡಿ

ಶ್ರೀ ಮರುಳಾಕಂಟ್ಲೇಶ್ವರ ದೇವರ ಗೂಳಿ (ಬಸವ)





ಶಿವಗಂಗೆಯಲ್ಲಿ ದೊರೆತ ಬೃಹತ್ ಆಕಾರದ ಶಿವಲಿಂಗ

ನಾಗರ ಹೆಡೆ



